॥ ಓಂ ತತ್ಸತ್ ॥

# ಶ್ರೀಮದ್ಭಗವದ್ಗೀತಾ ಕೃಪಾಪೋಷಿತ

# ಸಂಸ್ಕೃತಿ

ಸಮಸ್ತ ಪ್ರಾಣಿಗಳ ಬದುಕಿನ ಆಗುಹೋಗುಗಳೆಲ್ಲಕ್ಕೂ ಆಶ್ರಯ ದಾತೆ ಭೂಮಾತೆ ಈಕೆಯ ಮಹತ್ಕಾರ್ಯದಲ್ಲಿ ಪ್ರಾಮುಖ್ಯವಾಗಿ ಭಾಗ ವಹಿಸಿರುವ ಆಕಾಶ, ಕಾಲ (ಸೂರ್ಯ) ಅಗ್ನಿ, ವಾಯು, ಜಲಗಳ ಒಕ್ಕೂಟಕ್ಕೆ ಗೀತೆಯಲ್ಲಿ ಪ್ರಕೃತಿ ಎಂದು ನಾಮಾಂಕಿತವಾಗಿದೆ. ಈ ಪ್ರಕೃತಿಮಾತೆ ಇತ್ತಿರುವ ವರಪ್ರಸಾದವೇ ನಾವು. ಅಥವಾ ನಮ್ಮ ದೇಹಗಳಾಗಿವೆ.

ಭ.ಗೀ.ಅ. 3. ಶ್ಲೋ. 27 ಪ್ರಕೃತೇಃ ಕ್ರಿಯಮಾಣಾನಿಗುಣೈಃಕರ್ಮಾಣಿ ಸರ್ವಶಃ । ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥

ಪ್ರಕೃತಿಯ ಗುಣಗಳಿಂದ ಎಲ್ಲಾ ರೀತಿಯಿಂದಲೂ ಕರ್ಮಗಳು ಮಾಡುತ್ತಿರುವುವು. ಅಹಂಕಾರ ವಿಮೂಢಾತ್ಮನು ನಾನು ಕರ್ತನು ಎಂದ[illegible]ತ್ತಾನೆ ॥

[illegible]ವರು. ಅವು ನಮ್ಮವು ಅಲ್ಲ. ಅವುಗಳಿಂದ [illegible]ಂದ ಅವು ಆಗಲಾರವು. ಅವುಗಳ ಸ್ವರೂಪ [illegible]ರಂತರ ಜಗತ್ಪರಿವರ್ತನೆಗೆ ಕಾರಣವಾಗಿದೆ [illegible]ಗೆ ಧರ್ಮಸಾಧನೆಗಾಗಿ ನಾವು ಸಮರ್ಪಿಸಲು [illegible]ಮಗೆ ಉಳಿದಿರುವ ಮಾರ್ಗವೆಂದರೆ ನಮ್ರತಾ ಪೂರ್ವಕವಾದ ಪ್ರಾರ್ಥನೆಯೊಂದು ಮಾತ್ರ ಸಾಧುವಾಗಿದೆ.

ಲೇಖಕ : **ಯಂ. ಅಂಜನಪ್ಪ**
ದೊಡ್ಡಬಳ್ಳಾಪುರ.

ಶ್ರೀ ನಾಗೇಂದ್ರ ಮುದ್ರಣಾಲಯ, ದೊಡ್ಡಬಳ್ಳಾಪುರ.

# ಶ್ರೀ ಮದ್ಭಗವದ್ಗೀತಾ ಕೃಪಾಪೋಷಿತ ಸಂಸ್ಕೃತಿ

**ಭ.ಗೀ.ಅ 6. ಶ್ಲೋ. 5. ಉದ್ಧರೇದಾತ್ಮನಾಂ ನಾತ್ಮಾನಾಮವ ಸಾದಯೇತ್ । ಆತ್ಮೈವಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ॥**
ತನ್ನಿಂದ ತನ್ನನ್ನು ಉದ್ಧಾರ ಮಾಡಿಕೊಳ್ಳಬೇಕು. ತನ್ನನ್ನು ತಗ್ಗಿಸಿಕೊಳ್ಳಬಾರದು ಏಕೆಂದರೆ, ತನಗೆ ತಾನೇ ಬಂಧುವು, ತನಗೆ ತಾನೇ ಶತ್ರುವು ॥ ಭೂಮಿ, ಆಕಾಶ, ಕಾಲ (ಸೂರ್ಯ) ಅಗ್ನಿ, ವಾಯು, ಜಲಸ್ವರೂಪ ಶಕ್ತಿಗಳ ನಾಮಾಂಕಿತದ ಮೇಲೆ ಸಂಕೇತಗಳನ್ನು ಕಲ್ಪಿಸಿ ಅರ್ಪಿಸುವ ನೈವೇದ್ಯ ಸನ್ಮಾನಗಳ ಸ್ವಪ್ರತಿಷ್ಠೆಯೆಲ್ಲವೂ ಆಕಾಶಕ್ಕೆ ಆಕಾಶವನ್ನರ್ಪಿಸಿ ಧನ್ಯನಾದೆನೆಂಬ ಭ್ರಮಿಕನ ಕಲ್ಪನೆಯಾಗಿದೆ. ದೈವೀಕೃತ್ಯಗಳ ದಾನಸ್ವರೂಪಿಣಿಯಾಗಿ ಮಾತಾಪ್ರಕೃತಿ ಪ್ರತ್ಯಕ್ಷವಾಗಿದ್ದಾಳೆ (ಇಂದ್ರಿಯಾಣಾಂ ಮನಶ್ಚಾಸ್ಮಿ) ಇಂದ್ರಿಯಗಳಲ್ಲಿ ಮನಸ್ಸು ನಾನೇ ಎಂದು ಇವುಗಳೆಲ್ಲವನ್ನೂ ಹಾಗೂ ತನ್ನನ್ನು ಅರಿಯುವ ವಿಶೇಷಜ್ಞಾನವನ್ನು ಮಾನವನಿಗೆ ದಯಪಾಲಿಸುತ್ತಾ ಸರ್ವರೊಳಗೂ ಭಗವಂತನಿದ್ದಾನೆ.

**ಭ. ಗೀ. ಅ. 4. ಶ್ಲೋ. 38. ನಹಿಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ । ತತ್ಸ್ವಯಂಯೋಗ ಸಂಸಿದ್ಧಃ ಕಾಲೇನಾತ್ಮನಿ ವಿಂದತಿ॥**
ಈ ಲೋಕದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರ ವಸ್ತು ಯಾವುದೂ ಇಲ್ಲ ಯೋಗದಿಂದ ಸಂಸಿದ್ಧಿಯನ್ನು ಹೊಂದಿದವನು ಕಾಲಕ್ರಮದಲ್ಲಿ ಆ ಜ್ಞಾನವನ್ನು ತನ್ನಲ್ಲಿ ತಾನೇ ಹೊಂದುವನು. ಆದ್ದರಿಂದ ಮಾನವನಲ್ಲಿರುವ ಜ್ಞಾನವು ವಿಕಾಸವಾಗುವ ಕೃತಿಯನ್ನು ಶೃತ ಪಡಿಸುವುದೇ ಸಂಸ್ಕೃತಿ.



ಸುಸಂಸ್ಕೃತಿಗಳಾದ ಓದುಗರಲ್ಲಿ ನಮ್ರ ಪ್ರಣಾಮಗಳು

ಮಾನ್ಯರೆ,

ನಿಮ್ಮ ಅಧ್ಯಯನದ ನಂತರ ಪ್ರತಿಯನ್ನು ನಿಮ್ಮ ಮಿತ್ರರಿಗೆ ಕೊಟ್ಟು ಅವರ ಜ್ಞಾನಾರ್ಜನೆಗೆ ಸಹಾಯಮಾಡಿ, ಪ್ರತಿಗಳು ಅಪವ್ಯಯವಾಗದಂತೆ ಎಚ್ಚರಿಕೆ ಇರಲಿ ಪ್ರತಿಗಳ ಅವಶ್ಯಕತೆ ಇದ್ದಲ್ಲಿ ಈ ಕೆಳಕಂಡವರಲ್ಲಿ ಉಚಿತವಾಗಿ ಪಡೆಯಿರಿ.



ಪ್ರತಿಗಳು ದೊರಕುವ ಸ್ಥಳ
**ಯಂ ಆಂಜನಪ್ಪ**
ಆರ್ಟ್‌ಸಿಲ್ಕ್ ಜವಳಿ ವ್ಯಾಪಾರಿಗಳು
ಕುಚ್ಚಪ್ಪನಪೇಟೆ, ದೊಡ್ಡಬಳ್ಳಾಪುರ.

**ವಿಶ್ವವನ್ನು ರಚಿಸಿದವರಾರು ? ತಾನ್ಯಾರು ?** ಎನ್ನುವ ಮಾನವ ಶ್ರೇಷ್ಠರ ಬಯಕೆ ನಿವಾರಿಸುವ ಆಧ್ಯಾತ್ಮವಿದ್ಯೆಗೆ ಹಿಂದೂ ಧರ್ಮವು ಕೊಟ್ಟಂಥ ಮಹತ್ವವನ್ನು ವಿಶ್ವದ ಬೇರಾವ ಧರ್ಮವೂ ಕೊಟ್ಟಂತೆ ಕಂಡು ಬಂದಿಲ್ಲ. ಧರ್ಮವೆಂದರೇನು ? ಆಧ್ಯಾತ್ಮ ವಿದ್ಯೆಯೆಂದರೇನು ? ಎಂಬುದನ್ನು ವಿಶ್ವದ ಬೇರಾವದೇಶವೂ ಅರಿಯದ ಪ್ರಾಗಿತಿಹಾಸಕಾಲದಲ್ಲೂ ಸಹ ಭಾರತ ದೇಶದಲ್ಲಿ ಆಧ್ಯಾತ್ಮವಿದ್ಯೆಯು ಪ್ರಕಾಶಮಾನವಾಗಿತ್ತೆಂದು ಗೀತೋಪನಿಷತ್‌ಗಳನ್ನು ಸಂದರ್ಶಿಸಿದ ವಿಶ್ವಮಾನವ ಯಾರೇ ಆಗಲಿ ಒಪ್ಪಲೇಬೇಕು. ಸರ್ವೋಪನಿಷತ್ ಗಳ ಸಾರವಾಗಿರುವ ಗೀತೆಯಲ್ಲಿ ಶೃತಪಡಿಸದ ವಿಚಾರವೇ ಇಲ್ಲ. ಎಡ್ವಿನ್ ಆರ್ನಾಲ್ಡರೆಂಬ ಆಂಗ್ಲಕವಿಯು ತನ್ನ ಭಾಷೆಯಲ್ಲಿ ರಚಿಸಿದ ಗೀತಾ ಅನುವಾದವೇ ತಮ್ಮ ಗೀತಾ ಅಭ್ಯಾಸಕ್ಕೆ ನಾಂದಿಯೆಂದು ಗಾಂಧೀಜಿಯವರು ತಾವು ರಚಿಸಿದ 'ಗೀತಾಮಾತೆ' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

**ಭ ಗೀ.ಅ. 4. ಶ್ಲೋ:8. ಪರಿತ್ರಾಣಾಯ ಸಾಧೂನಾಂ। ವಿನಾಶಾಯಚ ದೃಷ್ಕೃತಾಂ ॥ ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥**

ಸಾಧುಗಳನ್ನು ಕಾಪಾಡುವುದಕ್ಕಾಗಿಯೂ ದುಷ್ಕೃತ್ಯಗಳನ್ನು ನಾಶಮಾಡಿ ಧರ್ಮವನ್ನು ಸಂಸ್ಥಾಪನೆ ಮಾಡುವುದಕ್ಕಾಗಿ ಯುಗ ಯುಗಗಳಲ್ಲಿಯೂ ನಾನು ಹುಟ್ಟುತ್ತಿರುವೆನು ॥ ಅಧರ್ಮವನ್ನು ನಾಶಮಾಡಿ ಧರ್ಮವನ್ನು ಸಂಸ್ಥಾಪನೆ ಮಾಡುವುದು ತನ್ನಧರ್ಮವೆಂದು ಒತ್ತಿಹೇಳಿದ್ದಾನೆ ಭಗವಂತ ಅರ್ಜುನನಿಗೆ. ಅದರಂತೆ ಕುರುಕ್ಷೇತ್ರ ಯುದ್ಧದಲ್ಲಿ ಜಯಗಳಿಸಿ ತನ್ನ ಕ್ರಿಯಾ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುವುದರ ಮೂಲಕ ತನ್ನ ಧ್ಯೇಯಸಾಧನೆಯನ್ನು ಸಾದರ ಪಡಿಸಿ ಧರ್ಮೋದ್ಧಾರಕ ನೆನಿಸಿದ್ದಾನೆ.

ಅನಂತರ ನಾಡಿಗೆ ನಾಡೇ ಒಂದಾಗಿ ವಿಶ್ವಕ್ಕೆ ಧರ್ಮದ ಕಣ್ಣಾಗಿ ಯುಗ ಪುರುಷನು ತೋರಿದ ಆದರ್ಶಮಾನವ ಜೀವನದ ಜಾಡಿನೊಳಗೆ ಸುಂದರ ವಾಗಿ ಬಹಳಕಾಲ ಸಾಗಿತ್ತು ಆ ಮೇಲೆ ಬಂತು ಕಲಿಕಾಲ. ಸನಾತನ ಧರ್ಮೋದ್ಧಾರಕನು ಜನಿಸಿದ ನಾಡಿನಲ್ಲಿ ಅದೂ ಸ್ವಜನರಲ್ಲೇ ಹುಟ್ಟಿದವು ಹೊಸಪೀಳಿಗೆಗಳು. ಈ ಜನಕ್ಕೆ ಧರ್ಮಾಭಿಮಾನಕ್ಕಿಂತ ಸ್ವಾಭಿಮಾನವೇ

ಹೆಚ್ಚು. ದೇಶಾಭಿಮಾನವು ಶೂನ್ಯವಾದರೂ ದೇಹಾಭಿಮಾನವು ಮಾನ್ಯವಾಗಿದೆ. ಸ್ವಾರ್ಥಪರರಾಗಿ ಸ್ವಜನ ಪರಜನಗಳೆಂದಣಿಸಿದ ಇವರು ಧರ್ಮೋದ್ಧಾರಕನ ವಾಣಿಯನ್ನು ಪ್ರತಿಭಟಿಸಿದಂತೆ ಭಗವದ್ಗೀತೆಗೆ ವಿಪರೀತ ಅರ್ಥಗಳನ್ನು ಕಲ್ಪಿಸಿ ತದನುಸಾರವಾಗಿ ಮತಗಳನ್ನು ಪ್ರತಿ ಮತಕ್ಕೊಂದು ದೈವ ಸಂಕೇತ ವಿಗ್ರಹ ಗಳನ್ನು ಸೃಷ್ಟಿಸಿದರು.

ತಲೆ ಮಾರುಗಳು ಉರುಳಿದಂತೆ ಕವಲೊಡೆದ ಇವರ ಮತಗಳಲ್ಲಿ ನೂರಾರು ಉಪಮತಗಳಾದವು. ಇವರನ್ನೇ ಅನುಸರಿಸಿದ ದೇಶೀಯ ರಾಜರ ಆಳ್ವಿಕೆಯು ನಿರ್ಗಮನಕ್ಕೂ ಪರದೇಶೀಯರ ಆಳ್ವಿಕೆಯ ಆಗಮನಕ್ಕೂ ಕಾರಣರಾದರು.

ಪರದೇಶೀ ಆಡಳಿತಗಳು ಪ್ರೌಢ ಮಟ್ಟದಲ್ಲಿ ಸಂಘಟಿಸಿದಂತೆ ತಮ್ಮ ಮತಗಳನ್ನು ಯಶಸ್ವೀಯುತವಾಗಿ ಸ್ಥಾಪಿಸಿ ಭದ್ರವಾಗಿ ಉಳಿಸಿವೆ. ತದ್ವಿರುದ್ಧ ವಾಗಿ ಒಡೆದ ಮುತ್ತಿನಂತೆ ಮೌಲ್ಯ ಕಳೆದುಕೊಂಡ ಇವರ ದೇಶೀಯ ಮತ ಗಳು ತಲೆ ತಗ್ಗಿಸಿವೆ, ಧರ್ಮ ಶಬ್ದಾರ್ಥವನ್ನು ಹೊದ್ದಿರುವ ದೇಶೀಯ ಮತಾಚಾರ್ಯರಾದ ಇವರು ನಮಗೆ ಗೀತಾ ಧರ್ಮವನ್ನು ಮೀರಿದ ಶ್ರೇಷ್ಠ ಧರ್ಮವನ್ನಿತ್ತರೆ ? ಅಥವಾ ಕುಲಾಚಾರ ಕರ್ಮಗಳೇ ? ಧರ್ಮಕರ್ಮಗಳ ಸತ್ಯಅಸತ್ಯವನ್ನು ವಿಶದ ಪಡಿಸಿರುವ ಗೀತಾವಾಣಿಯಲ್ಲಿ ತಾವು ಕಂಡ ದೋಷ ಗಳೇನು ? ಸ್ವದೇಶ ಬಂಧುಗಳಿಗೆ ತಾವಿತ್ತಿರುವ ಕುಲಕರ್ಮಾಚಾರಗಳಿಂದ ಯಾವ ಮಹೋದ್ದೇಶ ಸಾಧಿತವಾಯಿತು ? ತಮ್ಮ ಪೂರ್ವಜರೆಲ್ಲರೂ ಗೀತಾ ಧರ್ಮ ವೃಕ್ಷದ ನೆರಳಿನಲ್ಲಿ ವಿಶ್ರಮಿಸಿದವರಲ್ಲವೇ ? ತಾವೂ ಸಹ ಅದೇ ನೆರಳಿ ನಾಶ್ರಯದಲ್ಲಿದ್ದು ತಮ್ಮದೇ ಪ್ರತ್ಯೇಕ ಧರ್ಮವೆಂದು ತಾವು ಎತ್ತಿ ಹಿಡಿದಿರುವ ಮತಧರ್ಮ ಛತ್ರಿಯು ವಿಶ್ವಮಾನವ ಕುಲಕ್ಕೆ ನೆರಳಿನ ಆಶ್ರಯ ನೀಡಬಲ್ಲದೇ

ಧರ್ಮ ಸಂಸ್ಥಾಪಕ ... ು ಅರ್ಜುನನಿಗೆ ಜ್ಞಾನ ಚಕ್ಷುವಿತ್ತ ... ಬಂಧುಗಳಿಗೆ ಕುಲಾಚಾರ ಕರ್ಮದ ... ಸ್ವತಾ ಯೋಗಂ ಪ್ರೋಕ್ತ ವಾನಹ ವ



ಈ ಅವ್ಯಯವಾದ ಯೋಗವನ್ನು ನಾನು ಲೋಕಕ್ಕೆ ಚಕ್ಷುವಾಗಿರುವ ಸೂರ್ಯನಿಗೆ ಆದಿಯಲ್ಲಿ ಭೋಧಿಸಿರುವೆನೆಂದು ದೃಢವಾಗಿ ಹೇಳಿರುವ ಭಗರ್ವಾ ಉವಾಚ ಗೀತಾಧರ್ಮವು ಸೂರ್ಯನಂತೆ ವಿಕಾಸ ಮಾನವ ಕುಲದ ಸ್ಥಿರಾಸ್ತಿಯಾಗಿದೆ. ತ್ರಿಕಾಲ ಜ್ಞಾನಿ ಭಗವಂತನು ನಿಮ್ಮ ಮತಕರ್ಮಗಳ ಕವಲು ಮಾರ್ಗವನ್ನು ಅಂದೇ ಕಂಡವನಂತೆ ಉತ್ತರಿಸಿದ್ದಾನೆ,

**ಭ.ಗೀ. ಅ. 4 ಶ್ಲೋ. 13. ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ ತಸ್ಯ ಕರ್ತಾರಮಪಿಮಾಂ ವಿದ್ಧ್ಯಕರ್ತಾರ ಮವ್ಯಯಂ ॥**

ಗುಣಕರ್ಮಗಳ ವಿಭಾಗದ ಮೂಲಕ ಚಾತುರ್ವರ್ಣ್ಯವು (ನಾಲ್ಕು ಜಾತಿ ಗಳು) ನನ್ನಿಂದ ಸೃಷ್ಟಿಸಲ್ಪಟ್ಟಿತು. ಅದರ ಕರ್ತೃವಾಗಿದ್ದರೂ ನನ್ನನ್ನು ಅವ್ಯಯ ನೆಂದೂ ಅಕರ್ತೃವೆಂದೂ ತಿಳಿ.

ಜನ್ಮಕ್ಕೂ ಜಾತಿಯಿಲ್ಲ. ಆತ್ಮನಿಗೂ ಜಾತಿಯಿಲ್ಲ, ದೇಹಾತ್ಮನ ಸಮ್ಮಿಳನದಿಂದಾಗುವ ಗುಣಕರ್ಮಗಳಿಗೆ ಮಾತ್ರ ನಾಲ್ಕು ಜಾತಿಗಳಾಗಿ ವಿಂಗಡಿಸಿದ್ದಾನೆ ಭಗವಂತ, ಇವುಗಳ ಅಂತ್ಯವು ನಿರ್ಧಾರವೆಲ್ಲವೂ ಜ್ಞಾನ, ಅಜ್ಞಾನ, ಸತ್ಯ–ಅಸತ್ಯ, ಧರ್ಮ-ಅಧರ್ಮ, ನ್ಯಾಯ-ಅನ್ಯಾಯ, ಒಳ್ಳೆಯವ ಕೆಟ್ಟವನೆನ್ನುವ ಎರಡರ ಅರ್ಥವನ್ನೇ ಸಿದ್ಧಾಂತ ಪಡಿಸಿದೆ.

**ಭಾಗವತ ಶ್ಲೋ. ಜನ್ಮನಾ ಜಾಯತೇ ಶೂದ್ರಃ। ಕರ್ಮಣಾಜಾಯತೇ ದ್ವಿಜಃ। ವೇದ ಪಾಠಾತ್ತು ವಿಪ್ರಸ್ಯಾತ್ ಬ್ರಹ್ಮಜ್ಞಾನಾತ್ತು ಬ್ರಾಹ್ಮಣಃ॥**

ಯಾರೇ ಆಗಲಿ ಹುಟ್ಟಿನಿಂದ ಶೂದ್ರನಾ (ಅಜ್ಞಾನಿಯಾ)ಗಿಯೂ ಆತ್ಮ ಸಂಸ್ಕಾರಗಳಿಂದ ದ್ವಿಜನಾಗಿ ವೇದಾಧ್ಯಯನಗಳಿಂದ ವಿಪ್ರನಾಗಿ ಬ್ರಹ್ಮ ಜ್ಞಾನ ನವನ್ನು ಹೊಂದಿದವನು ಬ್ರಾಹ್ಮಣ ನಾಗುತ್ತಾನೆ.

ಜನ್ಮತಃ ರಾಮ ಕೃಷ್ಣರಿಬ್ಬರೂ ಕ್ಷತ್ರಿಯರು. ನಮ್ಮ ಹನುಮನಾದರೋ ವಾನರ (ಕಾಡು ಮನುಷ್ಯ) ನೇ ಆಗಿದ್ದರೂ ಈ ತ್ರಿಮೂರ್ತಿಗಳನ್ನು ಕುಲೀನ ಬ್ರಾಹ್ಮಣರೆನ್ನುವವರು ತಾವೇ ಮುಂದಾಗಿ ಪುರಸ್ಕಾರವಿತ್ತು ಪೂಜಿಸುತ್ತಿರುವುದು

ಸತ್ಯ, ಧರ್ಮ, ನ್ಯಾಯ, ಒಳಿತಿನ ಸಾಬೀತಲ್ಲವೇ ? ಜಾತಿಯ ಪ್ರಶ್ನೆ ಇಲ್ಲಿರುವುದೇ ? ಗುಣ ಕರ್ಮಗಳು ವಿಂಗಡಿಸದೆ ವ್ಯವಹರಿಸಲು ಸಾಧ್ಯವೇ ?

**ಮಹಾ ಭಾರತ ಶ್ಲೋ. ಏಕವರ್ಣಂಮಿದಂ ಪೂರ್ಣಂ ವಿಶ್ವಮಾಸಿತ್ ಯುಧಿಷ್ಟಿರಃ।ಕರ್ಮಕ್ರಿಯಾ ವಿಶೇಷೇಣ ಚಾತುರ್ವರ್ಣ್ಯಂ ಪ್ರತಿಷ್ಠಿತಂ॥**

ಎಲೌ ಧರ್ಮರಾಜಾ ಪ್ರಾರಂಭದಲ್ಲಿ ಆರ್ಯ ಜಾತಿ ಒಂದು ಮಾತ್ರ ವಿತ್ತು, ಆನಂತರ ಸತ್ವರಜೋ ಮಿಶ್ರಿತ ಗುಣಗಳಿಂದ ನಾಲ್ಕುವರ್ಣಗಳಾದವು.

ಇಂದು ವಿಶ್ವದಲ್ಲಿ ಕ್ರೈಸ್ತ ಮತಧರ್ಮವು ಅಗ್ರಸ್ಥಾನದಲ್ಲಿದ್ದು ಸರ್ವತೋ ಮುಖವಾಗಿ ಪ್ರಬುಬ್ಧ ಶಿಖರವನ್ನೇ ಅಪ್ಪಿರುವುದು ಸರ್ವವಿದಿತ. ನಮ್ಮ ದೇಶದಲ್ಲೂ ಸಹ ಪರದೇಶಿ ಕ್ರೈಸ್ತ, ಇಸ್ಲಾಂ ಮತಧರ್ಮಗಳು ಒಕ್ಕೊಟ ಮಾರ್ಗ ದತ್ತ ಮುಂದುವರಿಯುತ್ತಿವೆ. ತದ್ವಿರುದ್ಧವಾಗಿ ದೇಶೀಯ ಧರ್ಮ ಗಳು ಅಧೋಗತಿ ಗಿಳಿಯುತ್ತಿವೆ. ನಮ್ಮ ಧರ್ಮೋದ್ಧಾರಕನಿತ್ತ ವಚನ ವೇನಾಯ್ತು ? ನಮ್ಮ ಮತ ಕರ್ಮಾಚರಣೆಗಳು ಧರ್ಮ ಸಮ್ಮತವಲ್ಲವೇ ?

ಎರಡು ಬಗೆಯಾಗಿ ವಿಂಗಡಿಸಿರುವ ಧರ್ಮದಲ್ಲಿ ವಸ್ತು ಕ್ರಿಯೆಗಳ ವಾಸ್ತವಿಕತೆಯನ್ನು ಯಥಾರ್ಥ ರೀತಿಯಲ್ಲಿ ಅರಿಯುವುದಕ್ಕಾಗಿ ಮಾನವ ಪ್ರಥಮವಾಗಿತನ್ನ ನೈಜಸ್ವರೂಪ ಆತ್ಮನನ್ನು ಅರಿಯುವುದು ಸ್ವಧರ್ಮವಾಗಿದೆ.

ಆತ್ಮನ ಸ್ಮರಣೆ ಸಹ ಇಲ್ಲದಿರುವ ನಾವು ಬದುಕಿರುವುದಕ್ಕೆ ಸಮಾಜ ಜೀವನವೇ ಬುನಾದಿಯಾಗಿದ್ದು ಅಂತ್ಯದವರೆವಿಗೂ ನಮ್ಮ ಅವಶ್ಯಕತೆಗಳೆಲ್ಲ ವನ್ನೂ ಸಮಾಜದಿಂದಲೇ ಪಡೆಯಬೇಕಾಗಿರುವುದರಿಂದ ಸಮಾಜ ದ್ರೋಹ ವಾಗದಂತೆ ಭಗವಂತನು ವಿಧಿಸಿರುವ ಧರ್ಮವೆಂಬ ಕಟ್ಟಳೆಯೊಳಗೆ ನಿಯಮ ಬದ್ಧ ಕ್ರಿಯೆ ಗಳಿಂದ ವಸ್ತುಗಳನ್ನುಗಳಿಸಿ ಯೋಗ್ಯ ರೀತಿಯಲ್ಲಿ ಬಳಸುವುದೇ ನಮ್ಮ ಸಮಾಜ ಧರ್ಮವಾಗಿದೆ.

ಮನೆ, ಮಠ, ಭಾವಿ, ಗುಡಿ ಗೋಪುರಗಳನ್ನು ತಯಾರಿಸುವಾಗ ಆಹಾರ ಸಾಮಗ್ರಿಗಳೇ ಮೊದಲಾದುವನ್ನು ಅಸ್ಪೃಶ್ಯರಿಂದ ತಾವು ಅಪೇಕ್ಷಿಸುವ ಸಕಲ ಸೌಲಭ್ಯಗಳನ್ನು ಪಡೆಯುವ ಮುನ್ನ ತಮಗೆ ಅಸ್ಪೃಶ್ಯತೆಯ ಸೋಂಕಿಲ್ಲ ಅಲ್ಲವೇ ? ಅವರಿಂದ ತಾವು ತಮ್ಮ ಅಪೇಕ್ಷೆಗಳು ಸಿದ್ಧಿಸಿದ ತಕ್ಷಣ ಸ್ಪೃಶ್ಯ ಪಂಜರವನ್ನು ಕಲ್ಪಿಸಿರುವ ತಮ್ಮ ಸಮಾಜ ಧರ್ಮಕ್ಕೆನ್ಯಾಯ ಸತ್ಯದ ಅರಿವಿದೆಯೇ?

ಕವಲೊಡೆದಿರುವ ಪ್ರತಿಯೊಂದು ಹಿಂದೂ ಉಪಮತದೊಳಗೂ ಹತ್ತಕ್ಕೂಕಡಿಮೆ ಇಲ್ಲದಷ್ಟು ವರ್ಗಗಳು ವಿಂಗಡಿಸಿರತಕ್ಕ ನೂರಾರು ಉಪಮತ ಗಳನ್ನು ಹೊಂದಿರುವ ಹಿಂದೂ ಪರಂಪರೆಯು ಭಿನ್ನಾರ್ಥಗಳನ್ನು ಪ್ರತಿಪಾದಿ ಸುವ ಸಹಸ್ರಾರು ಸಂಖ್ಯೆಯುಳ್ಳ ತಮ್ಮ ತಮ್ಮ ಮತ ಧರ್ಮಗುರು (ಮಠಾಧಿ ಪತಿ) ಗಳನ್ನು ಅನುಸರಿಸಿ ತಮ್ಮನ್ನು ತಾವೇ ಬಂಧಿಸಿ ಕೊಳ್ಳುವ ಅನರ್ಥಕ್ರಿಯೆ ಗಳೆಂಬುದು ಇವರ ಮನಸ್ಸಿಗೆ ವೇದ್ಯವಾಗದೇ ?

ದೇಶದ ಜನಸಂಖ್ಯೆಯಲ್ಲಿ ಇಂದು ಹರಿಜನ, ಮುಸ್ಲಿಂ, ಕ್ರೈಸ್ತ ಈ ಮೂವರನ್ನು ಕೂಡಿಸಿದರೆ ಶೇಕಡ ಐವತ್ತರಷ್ಟು ಈ ಜನರಿದ್ದಾರೆ, ಎನ್ನುವ ಸ್ಮರಣೆಯಾದರೂ ತಮಗೆ ಬೇಡವೇ ? ಕಳೆದ ಲೋಕಸಭಾ ಚುನಾವಣೆಯಲ್ಲಿ ಈ ಮೂವರು ರಾಜಕೀಯವಾಗಿ ಒಗ್ಗೂಡಿದ ಫಲಶೃತಿ ಏನಾಗಿದೆ ಎನ್ನುವು ದಾದರೂ ತಮಗೆ ಅರ್ಥವಾಗದೇ ? ರಾಜಕೀಯವಾಗಿ ಒಂದಾಗುವ ಜನಕ್ಕೆ ಧಾರ್ಮಿಕವಾಗಿ ಒಂದಾಗುವಕಾಲ ಅತಿ ಸಮೀಪವಲ್ಲವೇ ? ಸ್ವಾರ್ಥಾಪೇಕ್ಷೆ ರಹಿತ ಮಹಾತ್ಮ ಗಾಂಧೀಜಿಯವರಂತ ಸಂತರ ಲೋಕ ಕಲ್ಯಾಣಾಪೇಕ್ಷೆಯು ಸಿದ್ಧಿಸದೇ ? ತಮ್ಮ ಭಿನ್ನಾರ್ಥಗಳ ಭವಿಷ್ಯವೇನು ?

ಪಂಚಪಾತ್ರೆಯಲ್ಲಿ ಒಬ್ಬನ ದಾಹವಾರಿಸಲು ಸಾಕಾಗುವಷ್ಟು ಮಾತ್ರ ಜಲವಿದೆ. ಹತ್ತಾರು ಜನಕ್ಕೆ ಅಷ್ಟೇ ಜಲದಿಂದ ದಾಹವಡಗಿಸಲು ಸಾಧ್ಯವೇ? ಅದರಂತೆ, ಅನೇಕ ವಿಧ ನಾಮರೂಪ ದೈವ ಸಂಕೇತ ವಿಗ್ರಹಗಳನ್ನು ನಿರ್ಣಯಿಸಿರುವ ತಮ್ಮ ಚಿತ್ತದಲ್ಲಿ ಇದೊಂದೇ ನಿಜವಾದ ಸದೃಢದೈವವೆನ್ನುವ ಆಸ್ತಿಕ ಧರ್ಮವಾದರೂ ಉಳಿದಿದೆಯೇ ?

ತಮ್ಮ ತಾಯ್ನಾಡಿನಲ್ಲೇ ಹುಟ್ಟಿ ಬೆಳೆದು ಬಾಳಿಹೋದ ಸಾಧುಸಂತರು, ಶಿವ, ಶರಣ, ಹರಿದಾಸರೂ ಗುರುಭಕ್ತ ಮಹಾತ್ಮರೆಲ್ಲರೂ ಒಂದೊಂದೇ ದೈವನಾಮ ರೂಪಗಳಲ್ಲಿ ಧೃಢಭಕ್ತಿಯಿಟ್ಟು ತಮ್ಮ ಬಾಳನ್ನು ಸಾರ್ಥಕ ಪಡಿಸಿಕೊಂಡ ಶ್ರೇಷ್ಠರಲ್ಲವೇ ? ಅವರನ್ನೂ ಗೌರವಿಸಿ ಪೂಜಿಸುತ್ತಿರುವ ತಾವು ಅವರ ಮಾರ್ಗವನ್ನು ಸಂಪೂರ್ಣವಾಗಿಮರೆಯ ಬಹುದೇ ?

ತಮಗೆ ತಾಯಿತಂದೆಗಳ ಚಿತ್ರ ಪೂಜೆ ಮುಖ್ಯವೋ ? ಅಥವಾ ಅವರಕೋರಿಕೆ ಈಡೇರಿಸುವ ಸೇವಾ ಕ್ರಿಯೆಗಳು ಮುಖ್ಯವೋ? ತಮಗೆ ಜಿಲೇಬಿಮಾಡಿ ತಿಂದವರ ಸ್ಮರಣೆ ಮುಖ್ಯವೋ ಅಥವಾ ಅವರಂತೆ ತಾವೂ ಸಹ ಜಿಲೇಬಿಮಾಡಿ ತಿನ್ನುವುದು ಪ್ರಾಮುಖ್ಯವೋ ?

ಮಗುವಿಗೆ ಒಬ್ಬಳೇ ತಾಯಿ, ಪತಿವ್ರತೆಗೊಬ್ಬನೇ ಪತಿ. ವಿಶ್ವಕ್ಕೊಬ್ಬನೇ ದೈವ, ಚರಾಚರ ವಿಶ್ವವೇ ತಾನಾಗಿರುವ ವಿಶ್ವೇಶ್ವರ ಪ್ರತ್ಯಕ್ಷನಿದ್ದಾನೆ. ಸದಾ ನಿಮಗೆ ನೆನಪಿರಲಿ, ಆಳವಾಗಿ ಯೋಚಿಸಿ, ನೈಜ ಧರ್ಮ ಕರ್ಮದ ನೆಲೆಗತಿ ಯನ್ನು ನಿಮ್ಮ ಅಂತರಾತ್ಮನು ಅರಿಯಲಿ, ಮಾತಾ ಗೀತೆಯು ನಿಮಗೆ ಮಾರ್ಗ ವೀಯಲಿ ?



## ಸತ್ಕೃತಿ

**ಭ. ಗೀ. ಅ. 3 ಶ್ಲೋ. 21. ಯದ್ಯಾದಾ ಚರತಿ ಶ್ರೇಷ್ಠ ಸ್ತತ್ತ ದೇವೇತರೋ ಜನಃ ।**
**ಸಯತ್ಪ್ರಮಾಣಂ ಕುರುತೇ ಲೋಕಸ್ತ ದನುವರ್ತತೇ ॥**

ಶೇಷ್ಠನಾದ ಪುರುಷನು ಯಾವ ಯಾವುದನ್ನು ಅಚರಿಸುತ್ತಾನೋ ಅದನ್ನೇ ಇತರರು ಅನುಸರಿಸುತ್ತಾರೆ. ಅವನು ಯಾವುದನ್ನು ಪ್ರಮಾಣವನ್ನಾಗಿ ಮಾಡುತ್ತಾನೆಯೋ ಅದನ್ನೇ ಲೋಕವೂ ಅನುಸರಿಸುತ್ತದೆ ?

ತನ್ನ ಧ್ಯೇಯ ಸಾಧನೆಗಾಗಿ ಪ್ರಯೋಗಿಸಿದ ಸಾಮಭೇಧ ಯುಕ್ತಿಗಳು ವಿಪಲವಾದ್ದರಿಂದ ನೇರ ಕ್ರಮವಾದ (ದಂಡ) ಯುದ್ಧ ಮಾಡಿಸಿ ಪಾಂಡವರಿಗೆ ಜಯಗಳಿಸಿ ಕೊಟ್ಟು ಸಫಲನಾಗಿದ್ದಾನೆ ಭಗವಂತ.

ಆನಂತರ ಕಾಲದೊಳಗೆ ಉದ್ಭವಿಸಿದ ಧರ್ಮ ಆಧರ್ಮಗಳೆರಡೂ ತಮ್ಮ ಉಳುವಿಗಾಗಿ ನಡೆಸಿದ ಹೋರಾಟವು ಕಳೆದ ಶತಮಾನದವರೆವಿಗೂ ಸಾಗಿತ್ತು.

ಸಣ್ಣ ಹಿಂಸೆಯನ್ನು ದೊಡ್ಡ ಹಿಂಸೆಯಿಂದ ಹತ್ತಿಕ್ಕುವ ಧರ್ಮ ಸಂಸ್ಥಾಪನಾ ಕ್ರಿಯೆಗಳು ಸಾಕ್ಕಾಯ್ತು ಭಗವಂತನಿಗೆ. ಹೊಸ ಮಾರ್ಗವೊಂದನ್ನು ರೂಪಿಸಿದ ಯುಗವೇ ಪರಿವರ್ತನೆ ಮಾಡುವವನಂತೆ ಎಲ್ಲವೂ ಅದಲು ಬದಲು. ಹಿಂಸಾ ಮಾರ್ಗಕ್ಕೆ ಎದುರು ಅಹಿಂಸೆ, ಅಸತ್ಯಕ್ಕೆ ಎದುರು ಸತ್ಯ, ಅಧರ್ಮಕ್ಕೆ ಎದುರು ಧರ್ಮ, ಅನ್ಯಾಯಕ್ಕೆ ಎದುರು ನ್ಯಾಯ, ವಿಚಿತ್ರ ಅನುಭವದ ಇದರ ಕರ್ತವ್ಯಗಳೆಲ್ಲವೂ ಆಹಿಂಸೆ, ಸತ್ಯ, ಧರ್ಮ, ನ್ಯಾಯವನ್ನು ಅಪೇಕ್ಷಿಸುವ ಮಾನವ ಕುಲದ ಸಂಘಟನೆ ಮಾತ್ರ ವಾಗಿದೆ.

ತಮ್ಮ ಭವಿಷ್ಯವೆಲ್ಲಕ್ಕೊ ತಾವೇ ಹೊಣೆಗಾರರಾಗುವುದರಿಂದ ಧರ್ಮ-ಅಧರ್ಮ, ಸತ್ಯ-ಅಸತ್ಯ, ನ್ಯಾಯ ಅನ್ಯಾಯಗಳನ್ನು ಪ್ರತ್ಯೇಕಿಸುವಷ್ಟು ನೈತಿಕ ಶಕ್ತಿಯನ್ನು ಮಾತ್ರ ಇಂತಹ ಜನ ಮನದಲ್ಲಿ ವೃದ್ಧಿಗೊಳಿಸುವುದು ಪರಿಣಿತರ

ಆದ್ಯಕರ್ತವ್ಯವಾಗಿದೆ.

ಬೇಕುಬೇಡಾದ್ದೆಲ್ಲಕ್ಕೂ ನಿಮ್ಮಾತ್ಮನಿರ್ಧಾರಕ್ಕೆ ಫಲ ಖಚಿತ. ನಿನಗಿರುವ ಹಕ್ಕು ನಿನ್ನ ದೇಶಕ್ಕೂ ಇದೆ. ನಿನ್ನ ದೇಶದ ಪ್ರಗತಿ ವಿಗತಿ ಗಳೆರಡಕ್ಕೂ ನೀನೇ ಆಧಾರ ದೇಶದ ಜೀವಾಳವೇ ನೀನಾಗಿ ಪ್ರಜಾತಂತ್ರವೆನ್ನುವ ಬಹುಮತ ಧರ್ಮವನ್ನು ವಿಶ್ವದೊಳಗೆ ಇಂದು ಸ್ಥಿರಪಡಿಸುವುದಕ್ಕಾಗಿ ತನ್ನೆಲ್ಲಾ ಬಲಗಳನ್ನೂ ಪ್ರಯೋಗಿಸುವುದರಲ್ಲಿ ಹಿಂಸಾ ಅಹಿಂಸೆಗಳನ್ನು ಲೆಕ್ಕಿಸದೆ ಬಹುಜನಾ ಪೇಕ್ಷೆಯ ಸಿದ್ಧಿಗಾಗಿ ಹೋರಾಡುತ್ತಿದ್ದಾನೆ ಭಗವಂತ.

ನೈತಿಕ ಬಲ ಸಮೃದ್ಧಿಯೇ ದೇಶ ಪ್ರಗತಿಯ ಜೀವಾಳ. ಅದನ್ನು ಪೊಟುಕುಗೊಳಿಸುವ ಕ್ರಿಯೆಗಳು ಎಲ್ಲಿಂದಲೇ ಬಂದಿರಲಿ ಧರ್ಮ ಸಮ್ಮತವಾಗಲಾರವು. ವಿಕಾಸ ಬಯಸುವ ಮಾನವರ ದೇವತೆಯಂತಿರುವ ಗೀತಾ ಧರ್ಮವು ಎಡಗಾಲು ಪಾದ ಶಕ್ತಿಯಿಂದನಿಂತು ಬಲಗಾಲು ಹೆಜ್ಜೆ ಮುಂದಿಸುವಂತೆ ರಾಷ್ಟ್ರವನ್ನು ಪ್ರಗತಿ ಮಾರ್ಗದತ್ತ ಕೊಂಡೊಯ್ಯುವ ಧೀಮತಿಗಳಿಗೆ ರಾಜಮಾರ್ಗವಾಗಿದೆ.

ಇಂದು ನಮಗೆ ಬೇಕಾಗಿರುವುದು ಸಕಲ ಮತ ಧರ್ಮಗಳಿಂದಲೂ ಮುಕ್ತವಾಗಿ ಜ್ಞಾನ ವಿಕಾಸವಾಗುವ ಮಾರ್ಗವೊಂದೇ ಧರ್ಮವೆನ್ನುವ ಪ್ರಜಾಪ್ರಭುತ್ವ.

**ಭ.ಗೀ.ಅ 2.ಅರ್ಜುನ ಉವಾಚ ಶ್ಲೊ.7. ಕಾರ್ಪಣ್ಯ ದೋಷೋಪಹತಸ್ವಭಾವಃ ಪೃಚ್ಛಾಮಿತ್ವಾಂ ಧರ್ಮ ಸಂಮೂಢ ಚೇತಾಃ । ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿತನ್ಮೇ ಶಿಷ್ಯಸ್ತೇ ಹಂ ಶಾಧಿಮಾಂತ್ವಾಂ ಪ್ರಸನ್ನಮ್॥**

ದೈನ್ಯವೆಂಬ ದೋಷದಿಂದ ಕುಂದಿದ ಸ್ವಭಾವವುಳ್ಳವನಾಗಿ ಧರ್ಮ ವಿಷಯದಲ್ಲಿ ಮೂಢವಾದ ಮನಸ್ಸುಳ್ಳವನಾಗಿ ನಿನ್ನನ್ನು ಪ್ರಶ್ನೆಮಾಡುತ್ತೇನೆ. ಯಾವುದು. ನನಗೆ ಶ್ರೇಯಸ್ಕರವೋ ಅದನ್ನು ನಿಶ್ಚಯ ಪೂರ್ವಕವಾಗಿ ಹೇಳು. ನಾನು ನಿನ್ನ ಶಿಷ್ಯನು. ನಿನ್ನನ್ನೇ ಶರಣು ಹೊಂದಿರುವ ನನಗೆ ಭೋದಿಸು ॥

ಕುರುಗಳ ಶ್ರೇಯೋಭಿವೃದ್ಧಿಯೇ ತನ್ನ ಮಹದಭಿಲಾಷೆಯಾಗುಳ್ಳ ಹಾಗೂ ಅದರ ಸಾಧನೆಗಾಗಿ ತನ್ನ ಬದುಕಿನ ಸರ್ವಸ್ವವನ್ನೂ ಅರ್ಪಿಸುತ್ತಿರುವ ತನ್ನ ಪಿತಾಮಹ (ತಾತ ಭೀಷ್ಮ) ನನ್ನು ಮತ್ತು ಆರ್ಯಾವರ್ತದಲ್ಲೇ ತನ್ನನ್ನು ಶ್ರೇಷ್ಠ ಧನುರ್ಧಾರಿ ಅಪ್ರತಿಮ ವೀರ ಧನಂಜಯನನ್ನಾಗಿ ಮಾಡಿರುವ ತನ್ನಗುರುದೇವ (ದ್ರೋಣ) ನನ್ನು ಮತ್ತು ಕುರುರಾಜಕುಮಾರರ ಶ್ರೇಯಸ್ಸಿನಲ್ಲೇ ತಮ್ಮ ಸುಖವನ್ನು ಕಾಣುತ್ತಿರುವ ಚಿಕ್ಕಪ್ಪ ದೊಡ್ಡಪ್ಪಂದಿರನ್ನೂ ಹಾಗೂ ಯಾರ ಒಲುಮೆಗಾಗಿ ನಮ್ಮ ಪೌರುಷವೆಲ್ಲವನ್ನೂ ಪಂಥವೆಂಬಂತೆ ಒಡ್ಡಿ ಪ್ರಯತ್ನಿಸುತ್ತಿದ್ದೆವೋ ? ಯಾರ ಮುಖಭಂಗ ಮಾತ್ರದಿಂದಲೇ ನಮ್ಮ ತೃಪ್ತಿಯ ವಿಜಯೋತ್ಸಾಹವು ಪ್ರದರ್ಶನ ವಾಗುತ್ತಿತ್ತೋ ಅಂಥಹ ದಾಯಾದಿ ಸ್ವಬಂಧುಗಳೆಲ್ಲರನ್ನೂ ಈ ಯುದ್ಧದಲ್ಲಿ ನಾನು ಕೊಲ್ಲಬೇಕು, ಅಬ್ಬ ! ಇದೆಂತಹ ಕ್ರೂರಕೃತ್ಯ ಇದು ಧರ್ಮವೇ ?

ಧರ್ಮ ಅಧರ್ಮದ ಸಂದೇಹ ಭಯವು ಅರ್ಜುನನ ಮನಸ್ಸನ್ನು ಆವರಿಸಿದೆ ದೈನ್ಯದಿಂದ ಕುಗ್ಗಿದ ಧ್ವನಿಯಲ್ಲಿ ಮೊರೆ ಬಂದವನಂತೆ ಶರಣಾಗಿ ಸಂದೇಹ ನಿವೃತ್ತಿಯಾಗುವ ಧರ್ಮ ಮಾರ್ಗ ಯಾವುದೋ ತೋರೆಂದು ಭಗವಂತನನ್ನು ಪ್ರಾರ್ಥಿಸಿದ್ದಾನೆ.

**ಭ.ಗೀ ಅ. 2 ಶ್ಲೋ. 31. ಸ್ವಧರ್ಮಮಪಿ ಚಾವೇಕ್ಷ್ಯನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋನ್ಯತ್ ಕ್ಷತ್ರಿಯಸ್ಯನ ವಿದ್ಯತೇ ॥**

ಸ್ವಧರ್ಮವನ್ನು ಲಕ್ಷಿಸಿದರೂ ನೀನು ಭಯ ಪಡಬಾರದು, ಏಕೆಂದರೆ, ಧರ್ಮಯುಕ್ತವಾದ ಯುದ್ಧಕಿಂತಲೂ ಕ್ಷತ್ರಿಯನಿಗೆ ಬೇರೆ ಯಾವ ಶ್ರೇಯಸ್ಸೂ ಇರುವುದಿಲ್ಲ ॥

ಅದುವರೆವಿಗೂ ತಾನು ಮಾಡಿದ ಧರ್ಮಯುಕ್ತವಾದ ಅನೇಕ ಯುದ್ಧಗಳಲ್ಲಿ ಸ್ವಭಾವತಃ ಅರಿಭಯಂಕರನಾಗಿ ಸೆಣಸಾಡುತ್ತಿದ್ದ ಕ್ಷತ್ರಿಯ ವೀರ ಅರ್ಜುನನನ್ನು ಎಂದಿನಂತೆ ಪರಿಗಣಿಸಿ ತಾನು ನೀಡಿದ ಸಮಾಧಾನದಿಂದ

ಅರ್ಜುನನ ಸಂದೇಹ ನಿವೃತ್ತಿಯಾಗಿಲ್ಲವೆಂದು ಅರಿತಿದ್ದಾನೆ ಭಗವಂತ.

**ಭ.ಗೀ.ಅ. 3. ಶ್ಲೋ. 35. ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ । ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋಭಯಾವಹಃ ॥**

ಸ್ವಧರ್ಮವು ಗುಣರಹಿತವಾಗಿದ್ದರೂ ಚೆನ್ನಾಗಿ ಅನುಷ್ಠಾನಮಾಡಿದ ಪರಧರ್ಮಕ್ಕಿಂತಲೂ ಒಳ್ಳೆಯದು. ಸ್ವಧರ್ಮದಲ್ಲಿ ನಿಧನವಾದರೂ ಲೇಸು, ಪರಧರ್ಮವು ಭಯಂಕರವಾಗಿರುವುದು ॥

ಅಧರ್ಮ ನಿವೃತ್ತಿ, ಧರ್ಮಪ್ರವೃತ್ತಿಯ ಯಥಾರ್ಥ ಮಾರ್ಗ ಮಾತ್ರ ತಿಳಿಯಲಪೇಕ್ಷಿಸುತ್ತಿದ್ದ ಅರ್ಜುನನಿಗೆ ಸ್ವಧರ್ಮ ಪರಧರ್ಮವೆನ್ನುವ ಹೊಸ ಮಾರ್ಗವನ್ನು ಸೂಚಿಸಿದ್ದಾನೆ. ಹಾಗೂ ಅದರ ಧ್ಯೇಯಸಾಧನೆಗಳನ್ನು ವಿವರಿಸುವಂತೆ ಅರ್ಜುನನ ಮನಸ್ಸಿನಲ್ಲಿ ಮತ್ತಷ್ಟು ಕುತೂಹಲ ಕೆರಳಿಸಿದ್ದಾನೆ.

**ಭ.ಗೀ.ಅ. 18 ಶ್ಲೋ 47-66 ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ । ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥**

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ । ಅಹಂ ತ್ವಾಸರ್ವ ಪಾಪೇ ಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥**

ತಾ. 47-66 ಚೆನ್ನಾಗಿ ಅನುಷ್ಠಾನ ಮಾಡಿದ ಪರಧರ್ಮಕ್ಕಿಂತಲೂ ಗುಣವಿಲ್ಲದ ಸ್ವಧರ್ಮವೇ ಶ್ರೇಯಸ್ಕರವಾದುದು. ಸ್ವಭಾವದಿಂದ ನಿಯತವಾದ ಕರ್ಮವನ್ನು ಮಾಡುತ್ತಾ (ಮನುಷ್ಯನು) ಪಾಪವನ್ನು ಹೊಂದುವುದಿಲ್ಲ ॥

ಸರ್ವಧರ್ಮಗಳನ್ನೂ ಪರಿತ್ಯಜಿಸಿ ನನ್ನೊಬ್ಬನನ್ನೇ ಶರಣು ಹೊಂದು ನಾನು ನಿನ್ನನ್ನು ಸರ್ವಪಾಪಗಳಿಂದಲೂ ಬಿಡಿಸುವೆನು ಶೋಕಿಸಬೇಡ ॥

ಕಂಡು ಬರುವ ವಸ್ತುಗಳ ನಾಮರೂಪಗಳೆಲ್ಲವೂ ನಿರಂತರ ಮಾರ್ಪಾಟಾಗುತ್ತಿರುವುದೇ ಜಗತ್ತಿನ ಕ್ರಿಯಾ ಧರ್ಮವಾಗಿದೆ.

ಇಂದು ಬೀಜವಾಗಿ ಕಂಡದ್ದು ಕಾಲಾನುಗುಣವಾಗಿ ಮೊಳಕೆಯಾಗಿ, ಸಸಿಯಾಗಿ, ಮರವಾಗಿ, ಹೂವಾಗಿ, ಹೀಚಾಗಿ. ಕಾಯಾಗಿ, ಹಣ್ಣಾಗಿ ಪುನಃ ಬೀಜೋತ್ಪತ್ತಿಗೆ ಕಾರಣವಾದಂತೆ.

ಅಂದು ಏಳನೇ ತರಗತಿಯಲ್ಲಿ ನನ್ನ ಮೆಚ್ಚಿನ ಶಿಷ್ಯನಾಗಿದ್ದ ಬಾಲಕನೇ ಇಂದು ನಮ್ಮ ತಾಲ್ಲೋಕಿನ ಶಾಲೆಗಳ ಎ.ಇ.ಓ, ಮುಖ್ಯಾಧಿಕಾರಿಯಾಗಿದ್ದಾನೆ ನಾನೇ ಮುಖ್ಯ ಉಪಾಧ್ಯಾಯನಾಗಿರುವ ನನ್ನ ಶಾಲೆಗೆ ತನಿಖೆಗಾಗಿ ನನ್ನೆದುರಿನಲ್ಲೇ ಹಾಜರಾಗಿದ್ದಾನೆ, ಇಂತಹ ಸನ್ನಿವೇಶದಲ್ಲಿ ಉಭಯತ್ರರು ಅನುಸರಿಸಬೇಕಾದ ಧರ್ಮ ಯಾವುದು ?

ಯಾವ ಕಾಲದಲ್ಲಿ ನಾವುಕಾಣುವ ವಸ್ತುವಿನ ನಾಮರೂಪ ಕ್ರಿಯೆಗಳು ಆಯಾಕಾಲಕ್ಕೆ ಪರಿಚಯದ ಅಗತ್ಯವಿದ್ದಷ್ಟು ಮಾತ್ರ ಸತ್ಯವೆನ್ನುವಂತೆ ವರ್ತಿಸುವುದೇ ವ್ಯವಹಾರಿಕ ಧರ್ಮವಾಗಿದೆ. ನಾಮರೂಪ ಗುಣಗಳು ಮಾತ್ರ ಜಗತ್ತಿನ ಕ್ರಿಯಾ ಧರ್ಮಕ್ಕೆ ಒಳಪಟ್ಟಿವೆಯೇ ವಿನಃ ಆತ್ಮನು ಯಾವ ಧರ್ಮಕ್ಕೂ ಒಳಗಾಗುವನಲ್ಲ. ಹಾಗೂ ಆತ್ಮನು ಅವ್ಯಕ್ತ ಮತ್ತು ನಿರ್ಲಿಪ್ತ. ಆದ್ದರಿಂದ ಎಲ್ಲಾ ಧರ್ಮಗಳನ್ನು ಬದಿಗೊತ್ತಿ ಸರ್ವಾತ್ಮ ನಾದ ನನ್ನೊಬ್ಬನನ್ನೇ ಸ್ಮರಿಸಿ ಶರಣು ಬಾ, ನಾನು ನಿನ್ನನ್ನು ಸರ್ವಪಾಪಗಳಿಂದಲೂ ಮುಕ್ತನನ್ನಾಗಿಸುವೆ ಎಂದಿದ್ದಾನೆ ಭಗವಂತ.

**ಭ ಗೀ.ಅ. 18. ಶ್ಲೋ.73. ಅರ್ಜುನ ಉವಾಚ: ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ। ಸ್ಥಿತೋಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥**

ಎಲೈ, ಅಚ್ಯುತ ನಿನ್ನ ಅನುಗ್ರಹದಿಂದ ನನ್ನ ಮೋಹವು ನಷ್ಟವಾಯಿತು. ಸ್ಮೃತಿ ಲಭಿಸಿತು. ಸಂದೇಹ ಶೂನ್ಯನಾಗಿರುವೆನು. ನಿನ್ನ ವಚನದಂತೆ ನಡೆಯುತ್ತೇನೆ.

ಧರ್ಮ ಅಧರ್ಮವನ್ನು ಮೀರಿದ ತನ್ನಾತ್ಮನ ನೈಜ ಸ್ಥಿತಿಯ ಸ್ಮೃತಿ ಉಂಟಾಗಿದೆ ಅರ್ಜುನನಿಗೆ. ಸಂಕಲ್ಪ ವಿಕಲ್ಪಗಳಿಂದ ದೂರವಾಗಿ ಸಂದೇಹ ಶೂನ್ಯವಾದಮನಸ್ಸು ಯಂತ್ರಾರೂಢವಾದಂತೆ ಭಗವಂತನನ್ನು ಕುರಿತು ನಿನ್ನ ಆದೇಶದಂತೆ ಯುದ್ಧ ಮಾಡುತ್ತೇನೆ ಎಂದಿದ್ದಾನೆ.

ಅವಶ್ಯಕವೋ ಅನಾವಶ್ಯಕವೋ ಪ್ರಾಣಿಗಳನ್ನು ಯಾರೇ ಕೊಲ್ಲಲಿ ಅಂತಹ ಕ್ರೂರ ಹಿಂಸಾಚಾರಿಗಳಿಂದ ದೂರ ಸರಿಯಬೇಕು ಎನ್ನುತ್ತಿದೆ ಉತ್ತಮ ಜನಾಂಗ.

ಮಹದಾಕಾಂಕ್ಷಿ ಅರ್ಜುನ ರಾಜ್ಯಾಭಿಲಾಷೆಯಿಂದ ತನ್ನ ಒಡಹುಟ್ಟಿದ ಕರ್ಣ, ಪಿತಾಮಹಭೀಷ್ಮ, ಗುರುದೇವ ದ್ರೋಣ, ದಾಯಾದಿ ಸ್ವಭಾಂಧವರ ಸಹಿತ ಲಕ್ಷಾಂತರ ಜನರನ್ನು ಕೊಂದು ಧರ್ಮ ಜ್ಞಾನಿ, ಧೀಮತಿ ಎನಿಸಿ ಭವಿಷ್ಯತ್ತಿನ ಸಬಲ, ಕ್ರಿಯಾಶೀಲ, ಗೃಹಸ್ಥಾಶ್ರಮ ಧರ್ಮೀಯರಿಗೆ ಆದರ್ಶನಾಗಿದ್ದಾನೆ ಅರ್ಜುನ.

ಗೃಹಸ್ಥರಿಗೆ ಜನಿಸಿ ಗೃಹಸ್ಥಾಶ್ರಮದ ಸಹಾಯದಿಂದಲೇ ಬೆಳೆದು ಬಾಳುತ್ತಿದ್ದರೂ ಸ್ಮರಣೆ ಇಲ್ಲದವರಂತೆ ತಮ್ಮದೇ ಪ್ರತ್ಯೇಕ ಧರ್ಮವೆನ್ನುವ ಯತಿಗಳೇ ಮೊದಲಾದ ಕರ್ತವ್ಯಚ್ಯುತರಿಂದ ಮಾತಾಗೀತೆಯು ರಚಿಸಿಲ್ಲಾ.

ಶುಕ ಮಹರ್ಷಿಯ ಜನಕ ಧೃತರಾಷ್ಟ್ರ, ಪಾಂಡು ಹಾಗೂ ವಿದುರನ ಜನ್ಮದಾತ, ಮಹರ್ಷಿವೇದವ್ಯಾಸರಿಂದಾ ರಚಿತವಾಗಿದೆ.

ನಾಲ್ಕು ಜನಪತ್ನಿಯರು, ಅನೇಕ ಪುತ್ರ ಪೌತ್ರರೂ ಸೋದರ ಸಂಬಂಧಿ ಗಳೇ ಮೊದಲಾಗಿ ಅಗಾಧ ಬಂಧುಗಳಿಂದ ಕೂಡಿದ ಕ್ಷತ್ರಿಯ ವೀರ ಅರ್ಜುನ ತನ್ನ ಧರ್ಮವಾದ ರಾಜ್ಯಾಭಿಲಾಷೆ ಸಹಿತ ಅಷ್ಟಭೋಗ ತೇಜಸ್ಸಾಮ್ಯಗಳನ್ನು ಗಳಿಸಿಕೊಳ್ಳುವುದಕ್ಕಾಗಿ ಶರಣಾಗಿದ್ದಾನೆ ಶ್ರೀ ಕೃಷ್ಣನಿಗೆ.

ಅರ್ಜುನನಿಗೆ ನಾಲ್ಕು ಪತ್ನಿಯರಾದರೆ ಆತನ ಗುರು ಶ್ರೀ ಕೃಷ್ಣನಿಗೆ ಎಂಟು ಮಂದಿ ಪತ್ನಿಯರಿದ್ದರೆಂದು ಪ್ರತೀತಿ ಇರುವುದರಿಂದ ಈ ಮಹಾ

ಪುರುಷೋತ್ತಮನ ಸ್ವಪರಿವಾರವು ಅರ್ಜುನನಿಗಿಂತಲೂ ಒಂದು ಪಟ್ಟು ಹೆಚ್ಚಿನದಾಗಿರಲೇಬೇಕು.

ಗೃಹಸ್ಥಾಶ್ರಮಿ (ಸಂಸಾರಿ) ಯಾಗಿರುವವರ ಮನಸ್ಸನ್ನು ಸನ್ಯಾಸಿಯಂತೆ ಪರಿವರ್ತಿಸಿ ಸುವ್ಯವಸ್ಥಿತ ಶ್ರೇಷ್ಠ ಸಮಾಜ ಸುಧಾರಕನನ್ನಾಗಿಸುವುದಕ್ಕಾಗಿ ಗೀತಾಧರ್ಮವನ್ನು ಉಪದೇಶಿಸಿದ್ದಾನೆ ಈ ಪುಟ್ಟ ಸಂಸಾರಿ ತನ್ನ ಸಹಚರನಿಗೆ.

ತಮ್ಮ ಬಾಳು ಸನ್ಯಾಸ ಮಾಡುವುದಕ್ಕಾಗಿ ಸಂಸಾರದಿಂದ ದೂರಸರಿದೆವೆನ್ನುತ್ತ ತಮ್ಮ ಅಪೇಕ್ಷೆಗಳ ಪೂರೈಕೆಗಾಗಿ ಸಂಸಾರಿಗಳನ್ನೇ ಅವಲಂಬಿಸುತ್ತಿರುವ ವೇಷಧಾರಿಗಳಂತಲ್ಲ, ಸಂಸಾರಿಗಳೊಳಗೆ ತಾನಾಗಿದ್ದು ಸಂಸಾರಗಳನ್ನು ಉದ್ಧಾರಮಾಡುವ ಸನ್ಯಾಸ ಮಾರ್ಗವನ್ನು ತೋರಿಸಿ ಪೂಜ್ಯನಾಗಿದ್ದಾನೆ ಶ್ರೀಕೃಷ್ಣ.

ಕ್ರಾಂತಿವೀರ ಅರ್ಜುನನಿಂದ ಪ್ರಾರಂಭವಾಗಿ ವಿಶ್ವದ ಬಹಳಷ್ಟು ಮಂದಿಯನ್ನು ಉದ್ಧಾರ ಮಾಡಿರುವುದಲ್ಲದೆ ಭಾರತ ಮಾತೆಯ ಸುಪುತ್ರರಾಗಿ ಜನಿಸಿ ಭಾರತಾಂಬೆಯ ದಾಸ್ಯ ವಿಮೋಚಕರಾದ ಸ್ವಾಮಿ ವಿವೇಕಾನಂದ, ರವೀಂದ್ರನಾಥ ಠಾಗೋರ್, ಬಾಲಗಂಗಾಧರ ತಿಲಕ್, ಅರವಿಂದಘೋಷ್ ಮಹಾತ್ಮಾ ಗಾಂಧೀಜಿ ಇವರೆಲ್ಲರಿಗೂ ಗೀತಾ ಧರ್ಮವು ಮಾರ್ಗದರ್ಶಕವಾಗಿದ್ದರ ಜೊತೆಗೆ ರಕ್ಷಣಾ ಕವಚವೂ ಸಹ ಆಗಿತ್ತು ಎಂಬುದನ್ನು ಹತ್ತೊಂಬತ್ತನೇ ಶತಮಾನದ ಯಾವ ಭಾರತೀಯನೂ ಮರೆಯಲಾರ.

ಸಾವಿರಾರು ವರ್ಷಗಳಿಂದಲೂ ವಿಶ್ವದ ಬೇರಾವ ದೇಶದ ಸಂಸ್ಕೃತಿಯಲ್ಲೂ ಕಾಣದಿರುವಂತೆ ಭಾರತೀಯ ಹಿಂದೂ ಪರಂಪರೆಯು ತನ್ನ ಸಂಸ್ಕೃತಿಯ ಹೆಸರಿನಲ್ಲಿ ಅರ್ಥವಿಲ್ಲದ ನಂಬಿಕೆಗಳಿಗೆ ದಾಸರಾಗಿ ದಿಕ್ಕೆಟ್ಟಿರುವುದು ಪ್ರತ್ಯಕ್ಷವಾಗಿದ್ದರೂ ಎಚ್ಚೆತ್ತ ಯುವಜನಾಂಗವು ಗೀತಾ ಧರ್ಮವನ್ನು ಸಾಧ್ಯವಿದ್ದಷ್ಟೂ ಆಚರಿಸದಿರುವುದು ದೇಶ ಪ್ರಗತಿಯ ಮಾರ್ಗಕ್ಕೆ ಒದಗಿರುವ ದುರ್ದೈವದ ಸಂಗತಿ.

**ಭ.ಗೀ.ಅ. 7 ಶ್ಲೋ. 16. ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ । ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ||**

ಎಲೈ ಭರತ ಶ್ರೇಷ್ಠನಾದ ಅರ್ಜುನ, ದುಃಖಿ, ಜಿಜ್ಞಾಸು, ಅರ್ಥಾರ್ಥಿ ಜ್ಞಾನಿ ಎಂಬ ನಾಲ್ಕು ಬಗೆಯ ಸುಕೃತಿಗಳಾದ ಜನರು ನನ್ನನ್ನು ಭಜಿಸುತ್ತಾರೆ||

ಸಾರ್ವಭೌಮನ ಸುಪುತ್ರ ಅರ್ಜುನನ ರಾಜ್ಯಾಭಿಲಾಷೆಯೆಂದರೆ ಸಾಮಾನ್ಯವೇ, ಅವನಪೇಕ್ಷಿಸುವ ರಾಜ್ಯದೊಳಗೆ ಧನ ಕನಕ, ವಸ್ತ್ರ ವಾಹನ ಗಳಾಗಲಿ ಷಡ್ರಸೋಪೇತ ಭೋಜನ ಪದಾರ್ಥಗಳಾಗಲಿ, ಸುಂದರ ಸುವಾಸಿನಿ ಯರೇ ಮೊದಲಾಗಿ ವಂದಿಮಾಗಧರು ಚತುರಂಗ ಬಲಸಮೇತ ಸಮೃದ್ಧ ಭೋಗವಸ್ತುಗಳುಳ್ಳ ಸುಖ ಸಂಪತ್ತುಗಳೇ ವಿನಃ ಭೋಗವಸ್ತುಗಳಿಲ್ಲದ ಬರಡು ಭೂಮಿಯಲ್ಲ.

ಅಂತಹ ಸುಖಸಾಮ್ರಾಜ್ಯಾಭಿಲಾಷೆಯುಳ್ಳ ಅರ್ಜುನ (ಅರ್ಥಾರ್ಥಿ ಯಾಗಿದ್ದಾನೆ) ತಾತ, ಗುರು, ಸೋದರ ಸಂಬಂಧಿಗಳನ್ನು ಕೊಲ್ಲುವ ಪಾಪದ ಭಯವು ಆವರಿಸಿ (ದುಃಖಿಯಾಗಿದ್ದಾನೆ ಅರ್ಜುನ) ಧರ್ಮವೋ ? ಅಧರ್ಮವೋ ? ಸೋಲೋ, ಗೆಲುವೋ? ನಿರ್ಧರಿಸಲಾಗದ (ಜಿಜ್ಞಾಸುವಾಗಿ ದ್ದಾನೆ ಅರ್ಜುನ)ಅಧರ್ಮ ಪಾಪಗಳನ್ನು ಸಹಿಸದೆ ಧರ್ಮದ ಶುಭೇಚ್ಛೆಯುಳ್ಳ (ಜ್ಞಾನಿಯಾಗಿದ್ದಾನೆ ಅರ್ಜುನ)

ಈ ನಾಲ್ಕು ಬಗೆಯ ಸುಕೃತಿಗಳ ಅಪೇಕ್ಷೆಗಳೆಲ್ಲವೂ ಅರ್ಜುನನೊಬ್ಬನಲ್ಲಿ ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ ಮಾತ್ರ ಕಂಡುಬಂದರೆ. ಇಂದು ನಮ್ಮಲ್ಲಿ ಈ ನಾಲ್ಕು ಅಪೇಕ್ಷೆಗಳು ದಿನ ನಿತ್ಯ ಕಂಡುಬರುವ ವ್ಯವಹಾರಗಳಲ್ಲೇ ಅಡ ಗಿದ್ದರೂ ಶುಭೇಚ್ಛೆಯು ಮಾತ್ರ ತಿರುಗು ಮರುಗಾಗಿದೆ.

ಭೂಮಿ, ಧನ ಧಾನ್ಯ, ಭೋಗೋಪ ವಸ್ತುಗಳು ನಮಗೆ ಬೇಡದ ಪದಾರ್ಥಗಳೇನು ? (ಅರ್ಥಾರ್ಥಿ) ಇವುಗಳ ಗಳಿಕೆ ಸಾಕಷ್ಟಿಲ್ಲದೆ ನಮಗೆ

ನಿತ್ಯಬವಣೆ ತಪ್ಪಿದೆಯೇ ? (ದುಃಖ) ಸುಖ ಸಾಧನೆಗಾಗಿ ನಾವು ಯೋಗ್ಯ ಮಾರ್ಗವನ್ನೇ ಅವಲಂಬಿಸಿದ್ದರೂ ನಿತ್ಯಜೀವನದಲ್ಲಿ ಕ್ಲಿಷ್ಟ ಸಮಸ್ಯೆಗಳು ನಮ್ಮನ್ನು ಕಾಡುತ್ತಿರುವ ಕಾರಣವೇನು? (ಜಿಜ್ಞಾಸೆ) ಶುಭೇಚ್ಛೆಯು ಅರ್ಥಾತ್ (ಜ್ಞಾನದ ಅಪೇಕ್ಷೆಯಾಗಿದೆ)

ದುಃಖ ನಿವೃತ್ತಿ ಸುಖಪ್ರಾಪ್ತಿಯೇ ಧ್ಯೇಯವಾಗುಳ್ಳ ಜೀವಿಗಳ ತಮ್ಮ ಕರ್ಮಾನು ಸಾರವಾಗಿ ನಾನಾಬಗೆಯ ಭೋಗ ವಸ್ತುಗಳ ಸಮೂಹವನ್ನೇ ಹೊಂದಿದ್ದರೂ ಸಂತೃಪ್ತರಾಗಿಲ್ಲ. ಈ ಸಂದರ್ಭದಲ್ಲಿ ನಾವು ಶ್ರೀಮಂತ ಪಶ್ಚಿಮ ದೇಶಗಳಲ್ಲೂ ಜ್ಞಾಪಿಸಿಕೊಳ್ಳಬಹುದು. ಕಾರಣ ಸುಖವೆಂಬುದು ಹೊರಗಿಲ್ಲ. ತನ್ನ ನೈಜಸ್ವರೂಪವೇ ಸುಖದ ಸ್ಥಾನವಾಗಿದೆ. ಸುಖವನ್ನ ಪೇಕ್ಷಿಸುವ ನಾವೆಲ್ಲರೂ ಅರ್ಜುನರೇ ಆಗಿದ್ದೇವೆ. ಆತನಿಗೆ ಭಗವಂತನು ಪದೇಶಿಸಿದ ತನ್ನ ನೈಜಸ್ವರೂಪದ ಜ್ಞಾನೋಪದೇಶವು ನಮಗೂ ಆವಶ್ಯಕ ವಾಗಿದೆ.

**ಭ ಗೀ.ಅ. 4 ಶ್ಲೋ. 1–2–3 ಇಮಂ ವಿವಸ್ವತೇಯೋಗಂ ಪ್ರೋಕ್ತ ವಾನಹಮವ್ಯಯಮ್ । ವಿವಸ್ವಾನ್‌ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ । ಸಕಾಲೇನೇಹಮಹತಾ ಯೋಗೋನಷ್ಟಃಪರಂತಪ ॥**

**ಸಏವಾಯುಂಮಯಾ ತೇದ್ಯ ಯೋಗಃಪ್ರೋಕ್ತಃ ಪುರಾತನಃ । ಭಕ್ತೋಽಸಿ ಮೇಸಖಾಚೇತಿ ರಹಸ್ಯಂ ಹ್ಯೇತದುತ್ತಮಮ್ ॥**

ಈ ಅವ್ಯಯವಾದ ಯೋಗವನ್ನು ನಾನು ಸೂರ್ಯನಿಗೆ ಹೇಳಿದೆನು. ಸೂರ್ಯನು ಮನುವಿಗೆ ಹೇಳಿದನು ; ಮನುವು ಇಕ್ಷ್ವಾಕುವಿಗೆ ಹೇಳಿದನು.

ಎಲೈ ಅರ್ಜುನ ಹೀಗೆ ಪರಂಪರೆಯಿಂದ ಬಂದ ಇದನ್ನು ರಾಜರ್ಷಿಗಳು ತಿಳಿದಿದ್ದರು. ಆ ಯೋಗವು ದೀರ್ಘಕಾಲವಾದುದರಿಂದ ಇಲ್ಲಿ ನಷ್ಟವಾಯಿತು. ನೀನು ನನಗೆ ಭಕ್ತನೂ, ಸ್ನೇಹಿತನೂ, ಆಗಿರುವುದರಿಂದ ಆ ಪುರಾತನ ಜ್ಞಾನಯೋಗವನ್ನು ನನ್ನಿಂದ ನಿನಗೆ ಹೇಳಲ್ಪಟ್ಟಿತು,

ಏಕೆಂದರೆ: ಇದು ಉತ್ತಮವಾದ ರಹಸ್ಯವು ಋಷಿಗಳೆಂದರೆ ತತ್ವವನ್ನು ಬಲ್ಲವರು, ಹೀಗೆ ಕ್ಷತ್ರಿಯ ಪರಂಪರೆಯಿಂದ ಬಂದ ಯೋಗವಾದ್ದರಿಂದ ಇದನ್ನು ರಾಜರ್ಷಿಗಳು ಬಲ್ಲವರಾಗಿದ್ದರು.

**ಭ.ಅರ್ಜುನ ಉವಾಚ ಅ. 4. ಶ್ಲೊ.4 ಅಪರಂ ಭವತೋಃ ಜನ್ಮಪರಂ ಜನ್ಮವಿವಸ್ವತಃ। ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥**

ನಿನ್ನ ಜನ್ಮವು ಇತ್ತೀಚಿನದು, ಸೂರ್ಯನ ಜನ್ಮವು ಹಿಂದಿನದು; ನೀನು (ಅದನ್ನು) ಮೊದಲೇ ಉಪದೇಶಮಾಡಿದೆ ಎಂಬುದನ್ನು ನಾನು ಹೇಗೆ ತಿಳಿದುಕೊಳ್ಳಲಿ ?

**ಭ.ಅ. 4 ಶ್ಲೋ 5 ಭಗವಾನ್ ಉವಾಚ : ಬಹೂನಿಮೇವ್ಯತೀತಾನಿ ಜನ್ಮಾನಿತವಚಾರ್ಜುನ। ತಾನ್ಯಹಂ ವೇದ ಸರ್ವಾಣಿ ನತ್ವಂವೇತ್ಥ ಪರಂತಪ ॥**

ಎಲೈ ಅರ್ಜುನಾ, ನನಗೂ ನಿನಗೂ ಅನೇಕ ಜನ್ಮಗಳು ಕಳೆದುಹೋಗಿವೆ. ಎಲೈ ಪರಂತಪನೆ ಅವುಗಳನ್ನೆಲ್ಲಾ ನಾನು ತಿಳಿದಿರುತ್ತೇನೆ. ನೀನು ತಿಳಿದಿಲ್ಲ ॥

ಹುಟ್ಟು ಸಾವೆಂಬುದ ಅವಯವರಹಿತ ತೇಜಸ್ವರೂಪ ಶಕ್ತಿ ಸೂರ್ಯನಿಗೆ ಜ್ಞಾನೋಪದೇಶವನ್ನು ತಾನು ಯಾವ ಪರಿಯಲಿ ಬೋಧಿಸಿಹನು ಎನ್ನುವ? ಹಾಗೂ ತಾನೂ ಸಹ ಭಗವಂತನಂತೆ ತನ್ನ ಹಿಂದಿನ ಜನ್ಮಗಳ ವೃತ್ತಾಂತವನ್ನು ಅರಿಯಬೇಕೆನ್ನುವ? ತನ್ನ ಬೇಡಿಕೆಯನ್ನು ಭಗವಂತನ ಮುಂದಿಡಲಾರದೆ ಈ ವಿಶೇಷ ಜ್ಞಾನದ ಗುಟ್ಟನ್ನು ಬೇಧಿಸಲಾಗದೆ ಅರ್ಜುನನೇ ಎಚ್ಚರ ತಪ್ಪಿದ್ದಾನೆಯೋ? ಅಥವಾ ಭಗವಂತನೇ ತನ್ನ ಮಹತ್ ಜ್ಞಾನ ಶಕ್ತಿಯನ್ನು ಅರಿಯಬೇಕೆನ್ನುವ ಇಚ್ಛೆಯನ್ನು ಅರ್ಜುನನ ಅಂತಃಕರಣದಲ್ಲಿ ಸ್ಮೃತಿಗೆ ತರಲಿಲ್ಲವೋ : ಊಹೆಗೆ ನಿಲುಕದ ಈ ಸಂದೇಹವು ಪ್ರತ್ಯಕ್ಷವಾಗಿದ್ದರೂ ಭಗವಂತನು ತನ್ನ ಸ್ವರೂಪ ಜ್ಞಾನದ ಅರಿವನ್ನು ಅರ್ಜುನನಲ್ಲಿಯೂ ಕಂಡವನಂತೆ (ಪಾಂಡವಾನಾಂ ಧನಂಜಯ) ನಾನೆಂದೂ

(ಆದಿತ್ಯಾನಾಮಹಂವಿಷ್ಣು ಜ್ಯೋತಿಷಾಂ ರವಿರಂಶಮಾನ್) ಸೂರ್ಯನು ನಾನೇ ಎಂದು ಘೋಷಿಸಿದ್ದಾನೆ.

ಹಾಗೂ (ನಮೇಭಕ್ತಪ್ರಣಶ್ಯತಿ) ಎಂದು ತನ್ನ ವಚನ ಪಾಲನೆಗಾಗಿ ಈ ಗುಟ್ಟನ್ನು ಸ್ವತಃ ತಾನೇ ಬೇಧಿಸಿ ವಿಶ್ವದಲ್ಲಿ ಕಳೆದುಹೋದ (ಇತಿಹಾಸ ವೆನ್ನುವ) ಧರ್ಮವನ್ನು ರಾಷ್ಟ್ರೀಕರಣ ಮಾಡಿದಂತೆ ದಿಗ್ದರ್ಶಿಸಿದ್ದಾನೆ.

ವ್ಯಕ್ತಿಯೊಬ್ಬನ ಹಿಂದಿನ ಜನ್ಮ ವೃತ್ತಾಂತಕ್ಕಿಂತಲೂ ಹೆಚ್ಚಿನದಾಗಿರುವ ಆತನ ವಂಶಾವಳಿಯ ಇತಿಹಾಸವನ್ನರಿಯುವುದಾದರೆ ಲೋಕಪ್ರಸಿದ್ಧರು, ಸಾಮಾನ್ಯರು ಕನಿಷ್ಠರಾಗಿ ಮೂರು ವರ್ಗದ ಜನರು ಪ್ರತಿಯೊಂದು ವಂಶ ದಲ್ಲಿಯೂ ಜನಿಸಿದ್ದಾರೆ.

ಪ್ರತಿಯೊಂದು ಗ್ರಾಮಕ್ಕೂ, ಪ್ರತಿಯೊಂದು ನಗರ ಹಾಗೂ ದೇಶ ಗಳಿಗೂ, ರಾಷ್ಟ್ರಗಳಿಗೂ ತಮ್ಮದೇ ಆದ ಇತಿಹಾಸ ಧರ್ಮವಿರುತ್ತೆ. ಅದರಂತೆ ಸೂರ್ಯ ಜನ್ಮದ ಹಿಂದೆ ಭಗವಂತನಿದ್ದಾನೆ.

ಧರ್ಮಗ್ಲಾನಿಯಾದಲ್ಲಿ ನಿವಾರಿಸುವ ಸಲುವಾಗಿ ನಾನು ಹುಟ್ಟು ತ್ತಿರುವೆನು ಎಂದಿರುವ ತನ್ನ ವಚನ ಪಾಲನೆಗಾಗಿ ಸುಖವೇ ಅತಿಯೋ. ದುಃಖವೇ ಆತಿಯೋ. ತಾನೇ ನಿರ್ಮಿಸಿ ಅನುಭವಿಸಿದ ಹಳೆಯ ಧರ್ಮದಲ್ಲಿ ತೃಪ್ತನಾಗದೆ ಸುಖದ ಗುರಿಸಾಧನೆಗಾಗಿ ನವೀನತೆಯನ್ನು ನಿರ್ಮಿಸುವುದರಲ್ಲೇ ತನ್ನ ಧರ್ಮವನ್ನು ಕಾಣುವವನಾಗಿದ್ದಾನೆ ಭಗವಂತ.

ಮಾನವರೂಪಿ ತನ್ನ ಆಜ್ಞೆಯಾಗುವುದೇ ತಡ ಇಂದ್ರಜಾಲದಂತೆ ತನಗಿಂತಲೂ ಹೆಚ್ಚಿನ ದಕ್ಷನಂತೆ ಕರ್ತವ್ಯ ನಿರ್ವಹಿಸುವ ಯಂತ್ರಯುಗವಾಗಿ ಪರಿವರ್ತನೆಗೊಳಿಸಿದ್ದಾನೆ, ಅದರ ಬಲದಿಂದ ಭೂಮಂಡಲದ ಜನಾಂಗ ವೆಲ್ಲವನ್ನೂ ಒಂದಾಗಿ ಕಂಡು ಸಕಲರ ಅನುಕೂಲತೆಗಳೂ ಒಂದೇ ತೆರನಾಗಿ ರುವ ಸಮಾನತೆಯುಳ್ಳ ಧರ್ಮವೊಂದೇ ಸಾಕೆನ್ನುವ ನಿರ್ಣಯವನ್ನು ಸಮೀಪಿಸುವುದಕ್ಕಾಗಿ ವಿಶ್ವಮಾನವರೆಲ್ಲರನ್ನೂ ಜಾಗೃತಗೊಳಿಸುತ್ತಿದ್ದಾನೆ.

ಇಂದು ಬೃಹದಾಕಾರವಾಗಿ ಹಬ್ಬುತ್ತಿರುವ ಈ ಬೆಳವಣಿಗೆಗಳಿಂದ ಆಸ್ತಿಕ ನಾಸ್ತಿಕರಿಬ್ಬರೂ ದಿಗ್ಮೂಢರಾಗಿದ್ದಾರೆ ವಾಸ್ತವಿಕ (ಸತ್ಯಾರ್ಥಿ) ತನ್ನ ಶ್ರಮಫಲವನ್ನು ಈಶ್ವರ ಸಂಕಲ್ಪವೆಂದು ಅನುಭವಿಸುತ್ತಿದ್ದಾನೆ.

(1) ಆಸ್ತಿಕ: ದೈವಿಕ ಆಚರಣೆಯಲ್ಲಿ ತನ್ನ ಮನಸ್ಸು ಬುದ್ಧಿಯನ್ನು ನಂಬದೆ ಕಣ್ಮುಚ್ಚಿಕೊಂಡು ಮಾಡುವ ವ್ಯವಹಾರಿಕ.

ಸದಾ ವಿಶ್ವಕ್ಕೆ ಕಾಲ, ಬೆಳಕು ಮತ್ತು ಶಾಖವನ್ನೀಯುತ್ತ ಜ್ಯೋತಿಯೇ ತನ್ನ ಸ್ವರೂಪವಾಗಿರುವ ಪ್ರತ್ಯಕ್ಷ ಸೂರ್ಯನ ಸ್ವಾನುಭವ ಸಿದ್ಧಾಂತವನ್ನು ಈತನು ಒಪ್ಪಿಲ್ಲ. ತನ್ನ ದೇಹದಂತೆ ಸೂರ್ಯನೂ ಸಹ ಮಾನವಾಕೃತಿಯೆಂದು ಮಾನವನೇ ಹೇಳಿ ಪ್ರತಿಷ್ಠಿಸಿದ ವಿಗ್ರಹವನ್ನು ಸೂರ್ಯನೆಂದು ನಂಬಿ ಪೂಜಿಸುವ ಈತನಿಗೆ ಪುರೋಹಿತರ ಹೇಳಿಕೆಗಳೇ ಆಧಾರ ಸಿದ್ಧಾಂತಗಳು.

ಇಂದು ಭೌತಿಕ ವಿಜ್ಞಾನಯುಗದ ಗರ್ಭದಲ್ಲಿ ಮುಂದುವರಿಯು ವಂತಾದರೂ ಈತನಿಗೆ ಪ್ರತ್ಯಕ್ಷವೂ ಸುಳ್ಳಾಗಿದೆ, ಭೌತಿಕ ವಿಜ್ಞಾನವು ಸ್ಮೃತಿಗೆ ಬಂದಿಲ್ಲ, ಗೀತಾವಾಣಿಯಂತೂ ಆಶ್ಚರ್ಯವಾಗಿದೆ. ಈತನ ಜ್ಞಾನೇಂದ್ರಿಯ ಗಳೆಲ್ಲವೂ ಅನ್ಯರ ವಶವಾದಂತೆ ನಿದ್ರಾವಸ್ಥೆಯಲ್ಲಿವೆ. ಈತನೆಣಿಸಿದಂತೆ ಸೂರ್ಯನು ಮಾನವಾಕೃತಿಯಾಗಿ ಇರುವುದಾದರೆ ವಿಶ್ವದಲ್ಲಿ ಜೀವಿಗಳ ಜಗತ್ಕ್ರಿಯೆಗಳ ಭವಿಷ್ಯವೇನು?

ಇವನನ್ನು ನಿರ್ಮಿಸಿದ ದೈವವು ಶೂನ್ಯವಾಗಿದೆ ಅಹಂಭಾವನೆಯಿಂದ ಮತ್ತೊಬ್ಬ ಮಾನವ ಪ್ರತಿಷ್ಠಿಸಿದ ದೈವವು ಮಾನ್ಯವಾಗಿದೆ. ತನ್ನನ್ನು ನಿರ್ಮಾಣಮಾಡಿದವನನ್ನು ಮರೆತು ತಾನೇ ಅವನನ್ನು ನಿರ್ಮಾಣ ಮಾಡಲು ಹೊರಟಿದ್ದಾನೆ.

2) ನಾಸ್ತಿಕ: ಮಾನವನ ಪ್ರಗತಿಗೆ ಭೌತಿಕ ವಿಜ್ಞಾನವೇ ಆಧಾರ ಸ್ತಂಭವೆನ್ನುವ ಇವನ ಧೋರಣೆಯೆಲ್ಲವೂ ಆಸ್ತಿಕನಿಗೆ ವಿರುದ್ಧವಾಗಿದೆ,

ಭೌತಿಕ ವಿಜ್ಞಾನದಲ್ಲಿ ಸಾಕಷ್ಟು ಯಶಸ್ವಿಯಾಗಿ ಮುಂದುವರಿಯು ತ್ತಿರುವ ಈತನು ಸ್ಥಿರಪಡಿಸಿರುವ ಸೂರ್ಯ ಹಾಗೂ ಪ್ರಕೃತಿ ಸ್ವರೂಪ

ಶಕ್ತಿಯ ಅನುಭವ ನಿರ್ಣಯಗಳು ಗೀತಾ ಸಿದ್ಧಾಂತಗಳನ್ನು ಅನೇಕವು ಸಮರ್ಥಿಸಿವೆ. ಪರಿಶೀಲಿಸದೆ ಯಾವೊಂದು ವಿಷಯವೂ ಅಂಗೀಕಾರವಿಲ್ಲ, ಪ್ರತಿಯೊಂದು ವಿಚಾರದಲ್ಲಿಯೂ ಮನಸ್ಸು ಬುದ್ಧಿಗಳೆರಡಕ್ಕೂ ಅಗ್ರಸ್ಥಾನ ಮನಸ್ಸು ಬುದ್ಧಿಗೆ ಮೀರಿದ ವಿಷಯವೇನಾದರೂ ಇರುವುದಾದರೆ ಅದು ಶೂನ್ಯವೇ ಎನ್ನುವುದು ಈತನ ಅಂತಿಮ ತೀರ್ಮಾನ.

ಕಾಮುಕನೊಬ್ಬ ಅತಿಯಾಗಿ ಪ್ರೀತಿಸುತ್ತಿದ್ದ ತನ್ನ ಪ್ರೇಮಿಯೊಬ್ಬಳು ಅಕಸ್ಮಾತ್ತಾಗಿ ಗತಿಸಿದ್ದಾಳೆ. ಆಕೆಯ ಶವವನ್ನು ಕಂಡ ಕಾಮುಕ ತಾನು ಅದುವರೆವಿಗೂ ಪ್ರೀತಿಸುತ್ತಿದ್ದುದು ಆಕೆಯ ಶವರೂಪ ಪ್ರಕೃತಿಯೇ? ಅಥವಾ ಆದರೊಳಗಿದ್ದು ಈಗಿಲ್ಲದಂತಾಗಿರುವ ಅವ್ಯಕ್ತ ಶಕ್ತಿ ಆತ್ಮನೇ? ಎನ್ನುವುದನ್ನು ಆರಿಯಲಾರದವನಾಗಿದ್ದು ಅರಿಯುವ ಪ್ರಯತ್ನದಲ್ಲಿದ್ದಾನೆ ಸಫಲನಾಗಿಲ್ಲ.

ಸದಾ ಪರಿವರ್ತನೆಯಾಗುತ್ತಿರುವ ಈ ಪ್ರಕೃತಿಯೆಲ್ಲವೂ ಸೂಕ್ಷ್ಮ ಜೀವಾಣುಗಳ ಮಯವೆನ್ನುವಷ್ಟು ಆಳವಾಗಿ ಭೂಮಂಡಲವನ್ನೇ ಪರೀಕ್ಷಿಸಿರುವ ತಾನು ತನ್ನ ಇರವಿನ ಸ್ಮರಣೆ ಇಲ್ಲದವನಾಗಿದ್ದಾನೆ. ಶೂನ್ಯದೊಳಗೆ ಕಂಡುಬರುವುದೆಲ್ಲವೂ ಪ್ರಕೃತಿಯೆನ್ನುವ ಈತನ ಸಿದ್ಧಾಂತವು ವಿಶ್ವದಲ್ಲಿ ಬೆಳೆಯುತ್ತಿರುವ ಸಮಾನತೆಯ ಧರ್ಮದಲ್ಲಿ ಒಂದುಗೂಡಿದೆ.

ಇತ್ತೀಚೆಗೆ ಚಂದ್ರಲೋಕದಲ್ಲಿ ಕಾಲಿಟ್ಟಿರುವ ಈತನು ಪರಮನೋ ವಿಜ್ಞಾನದ ಹೆಸರಿನಲ್ಲಿ ನಡೆಸಿರುವ ಶೋಧನೆಯಿಂದ ಇಂದ್ರಿಯಾತೀತ ಪ್ರಜ್ಞೆಯೊಂದಿದೆ ಎನ್ನುವಷ್ಟು ಸಮೀಪವರ್ತಿಯಾಗುತ್ತಿದ್ದಾನೆ. ಈ ದಿಶೆಯಲ್ಲಿ ಈತನು ಯಶಸ್ವಿಯಾದರೆ ಅದೊಂದು ವಿಸ್ಮಯಕಾರಕ ಸಾಧನೆ ಯಾದೀತು. ಮಾನವನ ಚಿತ್ತದಾಚೆಗಿನ ಈ ಗುಪ್ತ ಶಕ್ತಿಯನ್ನು ವ್ಯಕ್ತಸ್ಥಿತಿಗೆ ತಂದುಕೊಟ್ಟ ಕೀರ್ತಿಯು ಈತನಿಗೆ ಭವಿಷ್ಯತ್ತಿನ ಮಾನವ ಕುಲವೆಲ್ಲವೂ ಅರ್ಪಿಸುವ ಕೃತಜ್ಞತೆಯೂ ಆಚಂದ್ರಾರ್ಕವಾಗಿ ಉಳಿದೀತು. ಆಗ್ಗೆ ಪ್ರಜ್ಞಾನ

ಮಾನಂದಂ ಬ್ರಹ್ಮ ಎನ್ನುವವಾಸ್ತವಿಕ ಇಂದ್ರಿಯಾತೀತ ಪ್ರಜ್ಞೆಯೊಂದಿದೆ, ಎನ್ನುವನಾಸ್ತಿಕರಿಬ್ಬರೂ ಒಂದಾಗಿ ವಿಶ್ವದಲ್ಲಿ ಮೆರೆದಾರು. ಆಗ್ಗೆ ವಿಶ್ವದಲ್ಲಿ ಆಸ್ತಿಕ, ನಾಸ್ತಿಕ, ವಾಸ್ತವಿಕರಂತೆ ಮೂವರಿಲ್ಲ, ವಾಸ್ತವಿಕ (ಜ್ಞಾನಿ) ಆಸ್ತಿಕ (ಅಜ್ಞಾನಿ) ಇವರಿಬ್ಬರಿಗೇ ಸ್ಥಾನ.



## ಸತ್ಪ್ರಾಪ್ತಿ

(3) ವಾಸ್ತವಿಕ: ಸತ್ಯಶೋಧಕ, ವೇದಾಂತಿ, ಮೋಕ್ಷಾಪೇಕ್ಷಿ, ಜ್ಞಾನಿ ಎಂಬುದಾಗಿ ಬಹುತೇಕ ನಾಮಗಳಿದ್ದರೂ ಈತನಿಗೆ ಸತ್ಸಂಗಾಪೇಕ್ಷಿ ಎಂಬುದೇ ಸೂಕ್ತವೆಂದು ಬಲ್ಲವರು ತಿಳಿಸಿದ್ದಾರೆ.

ಸತ್ಸಂಗ ಸಿದ್ಧಾಂತವು ತೋರಿಕೆಯಲ್ಲಿ ಸಗುಣ, ನಿರ್ಗುಣವೆಂದು ಎರಡು ಬಗೆಯಾಗಿ ಕಂಡು ಬಂದರೂ ಅನುಭವದ ಅಂತಿಮ ನಿರ್ಧಾರವು ನಿರ್ಗುಣದ ಏಕತೆಯನ್ನು ಸ್ಥಿರಪಡಿಸುತ್ತದೆ.

**ಭ. ಗೀ.ಅ. 7 ಶ್ಲೋ. 4-5-6 ಭೂಮಿರಾ ಪೋಽನಲೋವಾಯುಃ ಖಂ ಮನೋ ಬುದ್ಧಿರೇವ ಚ। ಅಹಂಕಾರ ಇತೀಯಂ ಮೇಭಿನ್ನಾಪ್ರಕೃತಿ ರಷ್ಟಧಾ॥ ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್। ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್॥ ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ । ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥**

ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು ಬುದ್ಧಿ, ಮತ್ತು ಅಹಂಕಾರ ಎಂದು ನನ್ನ ಪ್ರಕೃತಿ ಎಂಟು ವಿಧವಾಗಿರುತ್ತದೆ. ಎಲೌ, ಮಹಾ ಬಾಹು ಇದು ಅಪರಾ ಪ್ರಕೃತಿ ಇದಕ್ಕಿಂತಲೂ ಭಿನ್ನವೂ ಜೀವರೂಪವೂ ಆದ ನನ್ನ ಪರಾಪ್ರಕೃತಿಯನ್ನು ತಿಳಿದುಕೊ. ಅದರಿಂದ ಈ ಜಗತ್ತು ಧರಿಸಲ್ಪಟ್ಟಿ ರುವುದು. ಸರ್ವ ಭೂತಗಳೂ ನನ್ನ ಎರಡು ಪ್ರಕೃತಿಗಳಿಂದ ಉಂಟಾಗಿವೆ ಎಂದು ತಿಳಿದುಕೊ. ಆದ್ದರಿಂದ ನಾನು ಸಮಸ್ತ ಜಗತ್ತಿನ ಸೃಷ್ಠಿ ಲಯಗಳಿಗೆ ಕಾರಣನಾಗಿರುವೆನು. ॥

ಸಕಲರದೃಷ್ಠಿಗೂ ವಿಶ್ವವಾಗಿ ಗೋಚರಿಸಲು ಅವಕಾಶವನ್ನಿತ್ತಿರುವ ಆಕಾಶ (ಬಯಲು) ಸ್ಥಿರವೆಂದು ಒಪ್ಪಲೇಬೇಕು. ನಮ್ಮ ದೇಹದ ಒಳಗೂ ಹೊರಗು ಇರುವ ಆಕಾಶವು ದೇಹವಿರುವಿಕೆಯಲ್ಲಿ ಚಲಿಸುವಿಕೆಯಲ್ಲಿ ಯಾವ ಪರಿಯಲಿ ಅವಕಾಶವೀಯುತ್ತಿದೆ ಎನ್ನುವ ವಿಧಾನ ಕ್ರಮವು ಹಾಗೂ ಕುಂಬಾ ರನು ಚಕ್ರವೊಂದರ ಸ್ಥಾನದಿಂದ ಮಾಡುವ ಅಗಣಿತ ಕುಡಿಕೆ ಮಡಿಕೆಗಳಿಗೆ

ಅವಕಾಶವನ್ನೀಯುತ್ತಿರುವ ವಿಧಾನ ಕ್ರಮವು ಎಂತಿಹುದೋ ಅರುಹಲು ಶ್ರೇಷ್ಠ ಭೌತಿಕ ವಿಜ್ಞಾನಿಯೂ ಸಹ ಅಸಮರ್ಥನಾಗಿದ್ದಾನೆ.

ಸ್ವಯಂ ಪ್ರಕಾಶವೇ ತನ್ನ ಸ್ವರೂಪವೆನ್ನುವುದಕ್ಕೆ ಸಾಬೀತಿನಂತೆ ಬೆಳಕಿನಿಂದ ಹಗಲಾಗಿ ಈತನು ಕಾಣದಿರುವಾಗ ಕತ್ತಲು (ರಾತ್ರಿ) ಗಳಿಂದ ದಿನವೆಣಿಸಲು ಸಹಾಯಕಾಲನಾಗಿ ಸೂರ್ಯನು ಭೂಮಿಯ ಗುರುತ್ವಾಕರ್ಷಣದ ಎಲ್ಲೆ ಮೀರಿ ಅತಿದೂರದಲ್ಲಿರುವ ತನ್ನ ಕಕ್ಷಿಯಲ್ಲೇ ಚಲಿಸುತ್ತಾ ತನ್ನ ಪ್ರಕಾಶ ಹಾಗೂ ಉಷ್ಣತೆಯನ್ನು ಜಗತ್ ಕ್ರಿಯೆಗಳಿಗಾಗಿ ನಿರಂತರ ಕೊಡುಗೆಯಂತೆ ಅರ್ಪಿಸುತ್ತಿರುವ ಈ ಮಹಾ ತೇಜಸ್ವರೂಪನ ಆದಿ ಅಂತ್ಯಗಳು ಮಾನವನ ಮನಸ್ಸಿಗೆ ಅರಿಯದಾಗಿದೆ.

ಅಂತೆಯೇ ಆಕಾಶ, ಭೂಮಿ, ಅಗ್ನಿ, ವಾಯು, ಜಲಗಳೂ ಸಹ ಇರುತ್ತವೆ.

ಭೂಮಿಯ ಗುರುತ್ವಾಕರ್ಷಣದ ಎಲ್ಲೆಯೊಳಗೆ ಈ ಪ್ರಕೃತಿಯು ಸ್ವಯಂ ತನ್ನಿಂದ ತನ್ನ ಕ್ರಿಯಾ ಪೂರ್ಣತೆ ಎಲ್ಲವನ್ನು ಕಾಲದ ಅಧೀನತೆಯಲ್ಲಿ ರಚಿಸಿ ಪರಿವರ್ತನೆ ಗೊಳಿಸುತ್ತಿರುವ ಅಂಡಜ, ಪಿಂಡಜ, ಉದ್ಭಿಜ, ಜರಾಯುಜವೆಂಬ ನಾಲ್ಕು ವಿಧ ಪ್ರಾಣಿಗಳ ಇರುವಿಕೆಯು ಮಾತ್ರ ಅಸ್ಥಿರ ಜಗತ್ತಾಗಿ ಕಂಡು ಬರುತ್ತೆ.

**ಭ.ಗೀ ಅ. 13. ಶ್ಲೋ. 19-20 ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ । ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಂಭವಾನ್ ॥ ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ । ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥**

ಪ್ರಕೃತಿ ಪುರುಷ ಇವೆರಡೂ ಅನಾದಿಯೆಂದು ತಿಳಿ. ವಿಕಾರಗಳು ಮತ್ತು ಗುಣಗಳು ಪ್ರಕೃತಿಯಿಂದ ಹುಟ್ಟಿದವುಗಳೆಂದು ತಿಳಿ ಪ್ರಕೃತಿಯು ಶರೀರೇಂದ್ರಿಯಗಳ ಉತ್ಪತ್ತಿಗೆ ಕಾರಣವೆನಿಸಿಹುದು. ಪುರುಷನು ಸುಖದುಃಖಗಳ ಅನುಭವಕ್ಕೆ ಕಾರಣವೆನಿಸಿಹನು ॥

ಪ್ರಕೃತಿಯಿಂದ ರಚಿಸಲ್ಪಡುವ ಕ್ರಿಯೆಗಳೆಲ್ಲವೂ ಗುಣಗಳಿಂದ ಆವರಿಸಲ್ಪಟ್ಟವುಗಳಾಗಿ ಕಾಲವ್ಯೂಹದಂತೆ ಸ್ಥಿರತೆಯಿಲ್ಲದಿರುತ್ತವೆ. ನಿರಂತರ ರಚನೆ ಪರಿವರ್ತನೆಗಳಿಗೆ ನಿಯಂತ್ರಣದಂತೆ ಬದ್ಧವಾಗುತ್ತಿರುವ ಜೀವಿಗಳ ಬದುಕಿನ ರಹಸ್ಯವನ್ನರಿತ ಭಗವಂತನು ದಯಾಪೂರ್ಣನಾಗಿ ಮಾನವನಿಗೆ ತನ್ನ ನೈಜ ಸ್ವರೂಪದ ಇರವನ್ನು ಅರಿಯಲು ವಿಶೇಷ ಜ್ಞಾನವನ್ನು ದಯಪಾಲಿಸಿ ಧರ್ಮ ಸ್ವರೂಪಿಯಾಗಿದ್ದಾನೆ. ಹಾಗೂ ಪಂಚ ಭೂತಗಳಿಂದ ಉದ್ಭವಿಸುವ ಸಕಲ ಅವಯವ ಸಹಿತ, ಮನಸ್ಸು, ದೇಹ, ಬುದ್ಧಿ, ಚಿತ್ತ, ಅಹಂಕಾರಗಳನ್ನು ನನ್ನಪ್ರಕೃತಿ ಎಂದಿರುತ್ತಾನೆ.

ಸಂಕಲ್ಪಿಸುವುದು ಮನ, ನಿಶ್ಚಯಿಸುವುದು ಬುದ್ಧಿ, ಇವೆರಡನ್ನೊಳಗೊಂಡು ದೇಹಿಯ ಸಕಲ ವ್ಯವಹಾರಗಳೆಲ್ಲಕ್ಕೂ ಕಾರಣವಾಗಿ, ಕ್ರಿಯೆಯಾಗಿ, ಕರ್ತೃವಾಗಿ, ಸುಖಿಯಾಗಿ, ದುಃಖಿಯಾಗಿರುವ ದೇಹನಾನೆಂಬ ಅಹಂಪ್ರಜ್ಞಾ ಭಾವನೆಯನ್ನು ಅಹಂಕಾರವೆನ್ನುತ್ತಾರೆ. ಈ ಅಹಂಪ್ರಜ್ಞಾ ಭಾವನೆಯಿಲ್ಲದ ದೇಹಿಗೆ ಜಗತ್ ವ್ಯವಹಾರಗಳೆಲ್ಲವೂ ಶೂನ್ಯವೇ ಸರಿ.

**ಭ. ಗೀ. ಅ 13 ಶ್ಲೋ. 29-30-31-32-33-34. ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ । ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥ ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ । ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ । ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ । ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾನೋಪಲಿಪ್ಯತೇ ॥ ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ । ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ । ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥**

ಸರ್ವಪ್ರಕಾರ ದಿಂದಲೂ ಪ್ರಕೃತಿಯೇ ಸಮಸ್ತ ಕರ್ಮಗಳನ್ನೂ ಮಾಡು

ವುದೆಂದು ತಾನು ಅಕರ್ತೃವೆಂದು ಯಾವನು ನೋಡುತ್ತಾನೆಯೋ ಅವನೇ ನೋಡುತ್ತಾನೆ ಪ್ರಾಣಿಗಳ ಪೃಥಗ್ಭಾವವು ಒಂದೇ ಆತ್ಮದಲ್ಲಿರುವುದೆಂದೂ ಮತ್ತು ಅದರಿಂದಲೇ ಇವೆಲ್ಲವೂ ವಿಕಾಸವನ್ನು ಹೊಂದಿವೆಯೆಂದು ಯಾವನು ಯಾವಾಗ ನೋಡುತ್ತಾನೆಯೋ ಆಗ ಬ್ರಹ್ಮವನ್ನು ಹೊಂದುತ್ತಾನೆ.

ಎಲೈ, ಅರ್ಜುನ ಅನಾದಿಯಾಗಿರುವುದರಿಂದಲೂ ನಿರ್ಗುಣನಾಗಿರುವುದರಿಂದಲೂ ಈ ಅವ್ಯಯನಾದ ಪರಮಾತ್ಮನು ಶರೀರದಲ್ಲಿದ್ದರೂ ಯಾವ ಕರ್ಮವನ್ನು ಮಾಡುವುದಿಲ್ಲ ಲಿಪ್ತನಾಗುವುದಿಲ್ಲ. ಹೇಗೆ ಸರ್ವವ್ಯಾಪಿಯಾದ ಆಕಾಶವು ಸೂಕ್ಷ್ಮವಾಗಿರುವುದರಿಂದ ಲಿಪ್ತವಾಗುವುದಿಲ್ಲವೋ ಹಾಗೆಯೇ ಎಲ್ಲ ದೇಹದಲ್ಲಿರುವ ಆತ್ಮನು ಲಿಪ್ತನಾಗುವುದಿಲ್ಲ.

ಎಲೈ ಅರ್ಜುನ ಒಬ್ಬನೇ ಆದ ಸೂರ್ಯನು ಈ ಲೋಕವನ್ನೆಲ್ಲಾ ಹೇಗೆ ಪ್ರಕಾಶ ಗೊಳಿಸುತ್ತಾನೆಯೋ ಹಾಗೆಯೇ ಕ್ಷೇತ್ರಜ್ಞನು ಸಮಸ್ತ ಕ್ಷೇತ್ರವನ್ನೂ ಪ್ರಕಾಶ ಗೊಳಿಸುತ್ತಾನೆ. ಹೀಗೆ ಕ್ಷೇತ್ರಕ್ಷೇತ್ರಜ್ಞರ ಭೇದವನ್ನು ಮತ್ತು ಭೂತಗಳ ಪ್ರಕೃತಿಯ ಮೋಕ್ಷವನ್ನೂ ಯಾರು ಜ್ಞಾನ ಚಕ್ಷುವಿನಿಂದ ತಿಳಿದುಕೊಳ್ಳುತ್ತಾರೆಯೋ ಅವರು ಬ್ರಹ್ಮವನ್ನು ಹೊಂದುತ್ತಾರೆ.

ಭೂತಕನ್ನಡಿಯೊಳಗಿನಿಂದ ಹೊರದೂಡಲ್ಪಟ್ಟ ಸೂರ್ಯರಶ್ಮಿಯು ವಸ್ತುವನ್ನು ದಹಿಸಿದಂತೆ ಸಾಮಾನ್ಯರಶ್ಮಿಯು ದಹಿಸಲಾರದು ಅದರಂತೆ ಅನಿತ್ಯ ದೇಹ ಸಂಪರ್ಕ ಭಾವನೆಯಿಂದ ಬಹಿರ್ಮುಖವಾಗಿ ತೋರಿಬರುವ ಅಹಂಕಾರವು (ದೇಹನಾನೆಂಬ ಪ್ರಜ್ಞೆಯು) ಇಚ್ಛಿಸಿದಂತೆ ಒದಗುವ ವಸ್ತುಗಳ ಸಂಯೋಗ ವಿಯೋಗಗಳಿಂದ ಉದ್ಭವಿಸುವ ಸುಖದುಃಖ ಭಾವನೆಗಳು ದೇಹಿಗೆ ಸ್ವಾಭಾವಿಕವೇ ಆಗಿದ್ದರೂ ವಾಸನಾತ್ರಯಗಳ ವಿರಾಗವೆಂಬ ಕಬ್ಬುಗಾಣದ ಯಂತ್ರಕ್ಕೆ ನಿತ್ಯಾನಿತ್ಯ ವಸ್ತು ವಿವೇಕವೆಂಬ ಎತ್ತುಗಳನ್ನು ಹೂಡಿ ರಸಾನ್ವೇಷಣೆಗಾಗಿ ಅಹಂಕಾರವೆಂಬ ಕಬ್ಬನ್ನು ಮರ್ಧಿಸಿ ಬೇರ್ಪಡಿಸಿದ ಸಿಪ್ಪೆಯಂತೆ ಅಹಂಕಾರವನ್ನು ಉದಾಸೀನತೆಯಿಂದ ತೃಣೀಕರಿಸುವವನಾಗಿ ಅಂತರ್ಮುಖದೊಳು ನಾನತ್ವವಿಲ್ಲದ ಭಾವನಾರಹಿತ ರಸವೆಂಬ ತನ್ನ ನೈಜ ಸ್ವರೂಪದ ಇರವಿನಲ್ಲಿದ್ದಂತೆ.

ಕನ್ನಡಿಯೊಳಗೆ ತೋರುವ ಸೂರ್ಯ ಪ್ರತಿ ಬಿಂಬದಂತೆ ನಾಮರೂಪಗಳ ಲೇಪವಿಲ್ಲದ ಅಹಂವೃತ್ತಿಯನ್ನು ಶುದ್ಧಾಂತಃಕರಣವೆನ್ನುತ್ತಾರೆ. ಈ ವೃತ್ತಿಯೂ ಸಹ ದೇಹಾತ್ಮ ಬುದ್ಧಿಯಲ್ಲೇ ಸ್ಫುರಣವಾಗಿದ್ದು ಪ್ರಕೃತಿಯ ಗುಣಕ್ರಿಯೆಗಳಿಗೆ ಬದ್ಧವಾಗಿರುವುದರಿಂದ ಈ ಅಹಂವೃತ್ತಿಯನ್ನು ನಿರ್ಲಕ್ಷಿಸುವಿಕೆಯಿಂದ ಭಾವನಾರಹಿತ ಕೇವಲ ತನ್ನ ಸ್ವಸ್ವರೂಪದ ಇರವನ್ನು ಲಕ್ಷಿಸಿ ನಿಶ್ಚಯಿಸುವಸಲುವಾಗಿ ತತ್ವಮಸಿ, ಅಹಂಬ್ರಹ್ಮಾಸ್ಮಿ ಮುಂತಾದ ಉಪನಿಷತ್ ಮಹಾವಾಕ್ಯಗಳನ್ನು ಯೋಗ್ಯರಿಂದಲೇ ಶ್ರವಣಮಾಡಿದರೂ ದೃಢಜ್ಞಾನಾನುಭವದ ಸಾಧ್ಯತೆಯು ಸಂಸ್ಕಾರ ಶುದ್ಧನಾದ ಸಾಧಕನ ನಿಷ್ಠಾಪೂರ್ವಕ ಶ್ರಮವನ್ನವಲಂಬಿಸಿರುತ್ತೆ. ಈ ಭಾವನಾರಹಿತ ಶುದ್ಧ ಚೈತನ್ಯದ ಇರುವಿಕೆಯನ್ನು ಶ್ರೀ ಶ್ರೀ ಶ್ರೀ ದೇವರದಾಸಿಮಾರ್ಯರು ಐಕ್ಯಸ್ಥಲವೆಂದು ಸಂಭೋಧಿಸಿದ್ದಾರೆ.

**ವಚನ. 121 (143) ಕುಲಸ್ವಾಮಿ ನೀನಿಂದ ಹೆಜ್ಜೆಯಲ್ಲದೆ ನಾನೊಂದು ಹೆಜ್ಜೆಯು ಸಿಡನಯ್ಯ । ಎನಗೊಂದು ಹೆಜ್ಜೆ ಇಲ್ಲಯ್ಯ ನಿನ್ನ ಹೆಜ್ಜೆ ಎನ್ನ ಹೆಜ್ಜೆ ಒಂದಾದ ಭೇಧವ ಜಗದನ್ಯಾಯಗಳಿತ್ತಬಲ್ಲಿರೈ ರಾಮನಾಥ ॥ ಖಂಡಿತನಲ್ಲದೆ ಅಖಂಡಿತನೇ ನಿಮ್ಮ ಕಂಡವರುಂಟೆ ಹೇಳಯ್ಯಾ ? ಕಂಡೆನೆಂಬುವರೆಲ್ಲಾ ಬಂಜೆಯ ಮಕ್ಕಳು ನೀನಿಂದ ಹೆಜ್ಜೆಯ ಕೆಳಗೆ ಬಂದು ಹುಟ್ಟಿ ಬೆಳಗಿದ ಚಂದವಕಂಡು ಕಣ್ತೆರೆದ ಕಾಣಾ ರಾಮನಾಥ॥**

ಅಹಂಕಾರವನ್ನು ಪರಮಾತ್ಮನಲ್ಲಿ ಉಂಟಾದ (ಭಾವನಾ) ವೃತ್ತಿಯೇ ಸರಿಯೆಂದು ನಿಶ್ಚಯಿಸಿ ನೀನಿಂದ ಹೆಜ್ಜೆಯೆಂದು ತಮ್ಮದೇ ಆದ ಕಟುನುಡಿಗಳಿಂದ ಸತ್ಸಂಗಾಪೇಕ್ಷೆಗಳನ್ನು ಬಡಿದೆಚ್ಚರಿಸಿದ್ದಾರೆ,

ಪಾತ್ರೆಯ ಒಳಗೂ ಹೊರಗೂ ಪೂರ್ಣವಾಗಿ ಆಕಾಶವು ತುಂಬಿದ್ದರೂ ಹಾಲು ಸೇವನೆ ಮುಂತಾದ ಕ್ರಿಯೆಗಳ ಸಾಧ್ಯತೆಗಾಗಿ ಪಾತ್ರೆಯ ಗುಣರೂಪಗಳು ಹೇಗೆ ಸಹಾಯವೋ, ಅದರಂತೆ ಇರುವುದು ಶುದ್ಧ ನಿರ್ಗುಣ ಚೈತನ್ಯವೇ ಆಗಿದ್ದರೂ ಚೈತನ್ಯತಾನೆಂದು ಅರಿಯಲಾಗದು. ಬೆಲ್ಲದ ಸಿಹಿ ಬೆಲ್ಲಕ್ಕೆ ತಿಳಿಯದೆ ಭಿನ್ನವಾದ ಜಿಹ್ವೆಗೆ ತಿಳಿದಂತೆ ದೇಹತಾನಲ್ಲ ತನ್ನದೂ ಅಲ್ಲ. ಪ್ರಕೃತಿ ಮಾತೆಯ ಅಂಶವಿರುತ್ತೆ.

ಸಕಲ ದೃಶ್ಯಗಳ ತೋರುವಿಕೆಗೆ ದೃಕ್ಕು (ಅಹಂಕಾರ) ನೆಲೆಯಾಗಿದೆ. ಶುದ್ಧ ಚೈತನ್ಯನ ನೆರಳಿನಂತೆ ತೋರಿಬರುವ ಈ ಅಹಂಪ್ರಜ್ಞಾಭಾವನೆಯನ್ನು ವ್ಯತಿರೇಕಿಸುವುದೇ ತನ್ನ ನೈಜ ಸ್ವರೂಪವನ್ನು ಅನ್ವಯಿಸಿದಂತೆ.

ಲೋಹ ಪ್ರತಿಮೆಗಳು ಪರಸ್ಪರ ಪೂರಕವಾಗಿರುವಂತೆ, ಸರ್ವವೂ ನಿರಾಕಾರ ನಿರ್ಗುಣದೊಳಗೆ ತೋರುವ ಚೈತನ್ಯವನ್ನು ಅರಿಯಲು ಸಾಕಾರ ಸಗುಣದ ಸಹಾಯ ಅತ್ಯವಶ್ಯಕವಾಗಿರುತ್ತೆ.

**ಈಶೋಪನಿಷತ್ತು ಶ್ಲೋ. । ಈಶಾವಾಸ್ಯಮಿದಂ ಸರ್ವಂ ಯತ್ಕಿಂಚಿ ಜಗತ್ಯಾಂ ಜಗತ್ ತ್ಯೇನ ತ್ಯಕ್ತೇನ ಭುಂಜ್ಜೀ ಥಾ ಮಾ ಗೃ ಧಃ ಕಸ್ಯಸ್ವಿದ್ಧನಂ ॥**



ಕಂಡುಬರುವ ಸಕಲ ಚರಾಚರಗಳೆಲ್ಲದರಲ್ಲಿಯೂ ಈಶ್ವರನಿದ್ದಾನೆ. ತ್ಯಾಗದಿಂದ ಭೋಗಿಸು ಪರರವಸ್ತುಗಳನ್ನು ಭ್ರಮಿಸಬೇಡ.

ಸಮಾನತೆಯ ಬಾಳನ್ನು ಬಯಸುವ ಸಜ್ಜನನಿಗೆ ಈ ಶ್ಲೋಕವೊಂದೇ ಸಾಕಾಗಿದೆ, ಕ್ರಿಯಂ ಸಾಧ್ಯತೆಗಾಗಿ ನಾಣ್ಯದ ಎರಡು ಕಡೆಯಲ್ಲಿ ಕಂಡು ಬರುವ ಮೌಲ್ಯ ಹಾಗೂ ಸರಕಾರದ ಸಂಕೇತಗಳಂತೆ ಸರ್ವವೂ ನಿರ್ಗುಣ ಚೈತನ್ಯನೊಳಗೆ ತೋರಿ ಸಕಲರಿಗೂ ವೇದ್ಯವಾಗುವ ಸಗುಣ ಸ್ವರೂಪ ಶಕ್ತಿಯು ಮಾತೆಯಂತೆ ನಿರ್ಗುಣಪಿತನನ್ನು ಅರಿಯಲು ತಾಯಿಯೇ ಸಾಧನ. ಮಾತೃ ವಾತ್ಸಲ್ಯವು ಸಕಲರಲ್ಲಿ ಒಂದೇ ವಿಧ. ತಂದೆಯ ಪ್ರೀತಿಯೆಂದರೋ ಸಂಗ ಸತ್ವಾಗಿ ಕಂಡ ಧೀಮಂತ ಪುತ್ರನಿಗೆ ಮಾತ್ರ ಮೀಸಲು.

**॥ ಶ್ರೀ ಕೃಷ್ಣಾರ್ಪಣಮಸ್ತು ॥**

**॥ ಲೋಕಾಸಮಸ್ತ ಸುಖಿನೋಭವತು ॥**

## ವಿಚಾರ ಮಂಥನ

**ಭ ಗೀ.ಅ. 2 ಶ್ಲೋ. 29- ಆಶ್ಚರ್ಯವತ್ ಪಶ್ಯತಿ ಕಶ್ಚಿದೇನ ಮಾಶ್ಚರ್ಯವದ್ವದತಿ ತಥೈವ ಚಾನ್ಯಃ । ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥**

ಒಬ್ಬನು ಈ ಆತ್ಮನನ್ನು ಆಶ್ಚರ್ಯದಂತೆ ನೋಡುತ್ತಾನೆ ಇನ್ನೊಬ್ಬನು ಆಶ್ಚರ್ಯದಂತೆ ಹೇಳುತ್ತಾನೆ. ಮತ್ತೊಬ್ಬನು ಇವನನ್ನು ಆಶ್ಚರ್ಯದಂತೆ ಕೇಳುತ್ತಾನೆ ಬೇರೊಬ್ಬನು ಇವನನ್ನು ಕೇಳಿದರೂ ಅರಿಯುವುದಿಲ್ಲಾ.

**ದೇವರ ದಾಸಿಮಾರ್ಯರ ವಚನ**

ಸತಿಯರ ಸಂಗವನು ಅತಿಶಯದ ಗ್ರಾಸವನು ಪೃಥಿವಿಗೀಶ್ವರನ ಪೂಜೆಯನು ಅರಿವುಳ್ಳೊಡೆಹೆರರಕೈಯಿಂದ ಮಾಡಿಸಬಹುದೇ ರಾಮನಾಥ.

**ಬಸವಣ್ಣನವರ ವಚನ**

ತನ್ನಾಶ್ರಯದ ರತಿ ಸುಖವನು ತಾನುಂಬ ಊಟವನು ತನ್ನಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ ಅನ್ಯರಿಂದ ಮಾಡಿಸಬಹುದೇ ಕೂಡಲ ಸಂಗಮದೇವ.

ಈ ಪುರುಷ ಶ್ರೇಷ್ಠರಿಬ್ಬರೂ ಮೇಲಿನ ಶ್ಲೋಕಾರ್ಥವನ್ನು ನವೀಕರಣ ಮಾಡಿ ತಮ್ಮ ಅನುಭವ ಬೆಳಕನ್ನು ನಾಡಿಗೆ ನೀಡಿದ್ದಾರೆ. ತಮ್ಮ ಸಮಕಾಲದಿಂದಲೂ ವೈದಿಕಧರ್ಮದ ಹೆಸರಿನಲ್ಲಿ ಹಿಂದೂ ಸಮಾಜವನ್ನು ಬಂಧಿಸಿ ಕಾಡುತ್ತಿರುವ ಪುರೋಹಿತ ಶಾಹಿಯ ಅಂಧಾನುಕರಣೆಯನ್ನು ಬುಡಮೇಲು ಮಾಡಿದ್ದಾರೆ.

ಭಗವಂತನು ಪುರೋಹಿತರ ಮಂತ್ರ ಶಬ್ದಾರ್ಥಗಳ ಆಜ್ಞಾಪಾಲಕನೇ? ಭಗವಂತನಿಗೆ ಇವರ ಮಂತ್ರ ಭಾಷೆಯಲ್ಲದೆ ಬೇರಾವ ಭಕ್ತರ ಭಾಷೆಯು ಅರ್ಥವಾಗದೇ? ಭಗವದ್ಭಕ್ತರಿಗೆ ಇವರೇನು ವಕೀಲರೇ ಅಥವಾ ದಲ್ಲಾಳಿಗಳೇ ಇವರ ಮಧ್ಯಸ್ತಿಕೆ ಇಲ್ಲದೆ ಭಗವಂತನು ತನ್ನ ಭಕ್ತರಿಗೆ ಒಲಿಯಲಾರನೇ ?

ಇತಿಹಾಸದ ಸಂತ ಶರಣ ಮಹಾತ್ಮರೆಲ್ಲರೂ ಇವರ ಮಧ್ಯಸ್ತಿಕೆಯಿಂದ ಪುನೀತರಾದರೇ ?

ತಾನು ರಮಿಸಬೇಕಾದ ಸ್ತ್ರೀಯಲ್ಲಿ ಮತ್ತೊಬ್ಬ ರಮಿಸಿದರೆ ತನ್ನ ಕಾಮ ದಾಹವು ಹಿಂಗೀತೆ? ತಾನುಂಬ ಊಟವನ್ನು ಬೇರೊಬ್ಬರುಂಡರೆ ತನಗೆ ತೃಪ್ತಿಯಾದೀತೇ ? ತಾನು ಆರಾಧಿಸುವ ದೈವವನ್ನು ಅನ್ಯರು ಆರಾಧಿಸಿದರೆ ತನಗೆ ಬಂದ ಸುಖವೇನು ?

ನಾಟಕ ಸಿನಿಮಾಗಳಲ್ಲಿ ಪ್ರೇಕ್ಷಕರಾಗಿ ಕುಳಿತು ಶ್ರೋತೃಗಳಾಗಿ ಆಲಿಸಿದಂತೆ ಇಂದು ತಮ್ಮಿಷ್ಟ ದೇವರ ಸ್ತೋತ್ರಗಳನ್ನು ಕೇಳಲಿಟ್ಟಿಸಿರುವ ರಿಕಾರ್ಡುಪ್ರಿಯರು ಭಗವದ್ಭಕ್ತರ ಚರಿತ್ರೆಯನ್ನು ನಟನಟಿ ಗಾಯಕರಲ್ಲಿ ತಾವು ಕಂಡಂತೆ ತಮ್ಮ ನೈಜಜೀವನದಲ್ಲಿ ಆಚರಿಸಿ ಕೃತಾರ್ಥನಾಗಲು ಸಾಧ್ಯವೇ ? ಅಂತಹ ಶ್ರಮವೆಲ್ಲವೂ ನಾಟಕೀಯವಾದೀತು.

ಅಂಗಡಿಯಿಂದ ತುಪ್ಪ ಸಕ್ಕರೆ ಕೊಂಡದ್ದು ನಿನ್ನ ನೆಚ್ಚಿನ ಅಡಿಗೆ ಮಿಠಾಯಿ ಮಾಡಿ ತಿನ್ನಲಿಕ್ಕೆ ವಿನಃ ಅನ್ಯರನ್ನು ಮೆಚ್ಚಿಸುವುದಕ್ಕಲ್ಲ. ವ್ಯಾಪಾರಕ್ಕೂ ಅಲ್ಲ ದೈವ ಕರ್ಮಾಚರಣೆಯ ಪುಣ್ಯದ ಮಳಿಗೆಗಳನ್ನು ಶೇಖರಿಸಿರುವ ಪುರೋಹಿತರು ಮಠಾಧಿಪತಿಗಳಲ್ಲಿರತಕ್ಕ ಸರಕಿನ ಮೂದರಿಗಳೆಲ್ಲವೂ ನಟನಟಿ, ಗಾಯಕರ ಅಂಗಡಿಯಲ್ಲಿವೆ. ಯೋಗ್ಯ ಅಗತ್ಯವಾದ ವಸ್ತು ಕೊಳ್ಳುವ ಜಾಣನೀನಾಗು. ಅತಿ ಎಲ್ಲವೂ ವ್ಯಾಪಾರಕ್ಕೆ ಅಂತಃಕರಣ ಶುದ್ಧವಾಗುವ ನಾಮ ಒಂದು ಸಾಕು ನಿನಗೆ ನೀನು ಧನ್ಯನಾಗಲಿಕ್ಕೆ.

ಪುರೋಹಿತ ಮಠಾಧಿಪತಿಗಳಿಬ್ಬರನ್ನೂ ಅಳಿಸಿಹಾಕುವಂತೆ ಕುಶಾಗ್ರಮತಿ ಅಲ್ಪ ಯಕ್ಷಿಣಿಬಲ್ಲ ಠಕ್ಕರು ದೇವರನ್ನು ವಶಪಡಿಸಿಕೊಂಡ ಪವಾಡ ಪುರುಷರಂತೆ ಬಲೆ ಒಡ್ಡಿದ್ದಾರೆ. ಒಂದುಸಾರಿ ಇವರ ಬಲೆಯೊಳಗೆ ಬಿದ್ದವನು ತಾನಾಗಿ ಸಂಶಯದ ಸುಳಿಯಲ್ಲಿ ಬಂಧಿಸಲ್ಪಟ್ಟಂತೇ ಸೈ. ಬಾಯೊಳಗೆ ಮಂತ್ರ ಮನಸೊಳಗೆ ತಂತ್ರವೆನ್ನುವಂತೆ ಸಂತರ ಕಥೆಗಳು ಭಾವಗೀತೆಗಳು ಇವರಿಗೆ ಪ್ರಚಾರ ಹಾಗೂ ರಕ್ಷಾ ಕವಚವಾಗಿದೆ.

ಪಟ್ಟಭದ್ರಹಿತದ ವ್ಯಾಮೋಹ ಚಪಲವುಳ್ಳ ಅನೇಕ ರಾಜಕಾರಣಿಗಳು ಇಂದೂ ಸಹ ಪುರೋಹಿತರು, ಮಠಾಧಿಪತಿಗಳ ಪವಾಡ ಪುರುಷರ ಚಟುವಟಿಕೆಗಳಲ್ಲಿ ದೇಹವೆರಡು ಧ್ಯೇಯ ವೊಂದು ಎನ್ನುವಷ್ಟು ನಂಬಿಕೆಯಿಂದ ಪರಸ್ಪರ ಒಂದುಗೂಡಿರುವುದು ಅತ್ಯಂತ ಸೋಜಿಗದ ಸಂಗತಿಯಾಗಿದೆ. ಧರ್ಮ, ಅರ್ಥ, ಕಾಮ, ಮೋಕ್ಷಗಳ ದಾನ ಸ್ವರೂಪಿಗಳಂತೆ ತೋರಿಸಿಕೊಳ್ಳುವ ಈ ತ್ರಿಮೂರ್ತಿಗಳ ಅನುಗ್ರಹ ಪ್ರಭಾವದಿಂದ ಓಟುಗಳಿಸಿ ಅಧಿಕಾರಾರೂಢರಾಗುವ ಹಂಬಲ ಒಬ್ಬರಿಗಾದರೆ ರಾಜಕಾರಣಿಗಳ ಮೈತ್ರಿಯುತ ಅಧಿಕಾರ ಸಂಪತ್ತಿನ ಪ್ರಚಾರದಿಂದ ತಾವು ಮಂದಿಯಲ್ಲಿ ಮತ್ತಷ್ಟು ಪ್ರಭಾವಿತರಾಗಿ ತಮ್ಮ ವರ್ಗದ ಪೀಠ ದೊಡ್ಡದಾಗಿಸುವ ಹಂಬಲ ಮತ್ತೊಬ್ಬರಿಗೆ, (ಪಟ್ಟ ಭದ್ರಹಿತಾಸಕ್ತಿಯುಳ್ಳ ಸತಿಪತಿಗಳ ಸಂಭ್ರಮವಿದ್ದಂತೆ.)

ಜ್ಞಾನ ವಿಜ್ಞಾನಗಳೆರಡರ ಏಕತ್ವದಿಂದ ಶ್ರಮಿಸಿ ಸಮಾನತೆಯ ಧ್ಯೇಯವನ್ನು ಸಾಧಿಸಬೇಕೆನ್ನುವುದು ಸುಸ್ಪಷ್ಟವಾಗಿ ಕಂಡುಬರುತ್ತಿರುವ ಇಂದಿನ ಹೊಸ ಯುಗದಲ್ಲಿ ಸದ್ಭಾವುಕನಿಗೆ ಗೀತಾವಾಣಿಯ ಸ್ಮರಣೆಯು ಅತಿಸ್ಫೂರ್ತಿಯುತವಾಗಿದೆ.

ಲೇಖಕ,
ಯಂ. ಆಂಜನಪ್ಪ
ದೊಡ್ಡಬಳ್ಳಾಪುರ.

275

ಆತ್ಮೀಯರೆ,

ಈ ಕಿರುಹೊತ್ತಿಗೆಯನ್ನು ಒಮ್ಮೆಯಾದರೂ ಶಾಂತ ಚಿತ್ತರಾಗಿ ಅಧ್ಯಯನ ಮಾಡಬೇಕೆಂದು ತಮ್ಮಲ್ಲಿ ಕಳಕಳಿಯಿಂದಾ ಪ್ರಾರ್ಥಿಸುತ್ತೇನೆ.

ಸತ್ಯವೊ-ಅಸತ್ಯವೊ? ಧರ್ಮವೊ-ಅಧರ್ಮವೊ? ನ್ಯಾಯವೊ-ಅನ್ಯಾಯವೊ? ಒಳಿತೊ-ಕೆಡುಕೊ ? ಸತ್ಕೃತಿಯೊ-ಅಪಕೃತಿಯೊ ? ಪರಿಶೋಧನೆಗಾಗಿ ನಿಮ್ಮ ಮನದ ಸ್ಮೃತಿ ಪಟಲದ ಮೇಲೆ ಒರೆಹಚ್ಚಿ ಅಂತಿಮ ತೀರ್ಮಾನದ ಹಕ್ಕನ್ನು (ಆತ್ಮ ಬುದ್ಧಿ ಸುಖಂಚೈವ) ಎನ್ನುವಂತೆ ನಿಮ್ಮಂತರಾತ್ಮನಿಗೆ ಸ್ವಾತಂತ್ರ್ಯ ವಹಿಸಿ ಕೊಡಿ ಸಂಸ್ಕೃತಿ ಅಹುದಾದರೆ ಅಹುದೆನ್ನಿ ಅಲ್ಲವಾದರೆ ಅಲ್ಲವೆನ್ನಿ ನಿಮ್ಮಂತ ರಾತ್ಮನೆ ನ್ಯಾಯಾಧಿಕಾರಿಯಾಗಿ ತೀರ್ಮಾನವೀಯಲಿ, ಅರ್ಥ ವಿಲ್ಲದ ನಂಬಿಕೆ ಗಳಿಂದ ದೂರ ಸರಿದು ನೈತಿಕ ಬಲದ ಸಂವೃದ್ಧಿಯನ್ನಪೇಕ್ಷಿಸುವ ಧರ್ಮಾಭಿಮಾನಿ ಗಳಾದ ಸುಹೃದಯರೇ ಸನಾತನ ಧರ್ಮ ಪ್ರಚಾರದ ಅಂಗವಾಗಿ ಇಂತಹ ಕಿರು ಹೊತ್ತಿಗೆಗಳನ್ನು ಆಗಾಗ್ಯೆ ಪ್ರಚುರ ಪಡಿಸುವ ಸೇವಾಕಾರ್ಯವನ್ನು ಕೈಗೊಳ್ಳವಂತೆ ಭಗವತ್ ಪ್ರೇರಣೆಯಾಗಿದೆ ಸುಜ್ಞಾನಿಗಳೂ ದಾರ್ಶನಿಕರೂ ಮೇಧಾವಿಗಳಾದ ತಾವು ಸಂಸ್ಕೃತಿಗೆ ಸಂಭಂಧಿಸಿದಂತೆ ಜ್ಞಾನ ವಿಕಾಸದ ಸಲುವಾಗಿ ಸಕಲರ ಅನುಭವಕ್ಕೂ ಸರಿದೂಗುವ ಪ್ರಗತಿಪರ ಲೇಖನಗಳನ್ನು ಕಳುಹಿಸಿಕೊಟ್ಟು ತಮ್ಮ ವಿಳಾಸದೊಂದಿಗೆ ಪ್ರಚುರಪಡಿಸುವ ಸೇವಾ ಸತ್ಕಾರ್ಯದಲ್ಲಿ ಭಾಗವಹಿ ಸುವ ಆವಕಾಶವನ್ನು ಕಲ್ಪಿಸಿಕೊಡಬೇಕಾಗಿ ಸವಿನಯ ಪ್ರಾರ್ಥನೆ.

ತಮ್ಮ ನುಡಿಮುತ್ತು ಸಂದೇಶಗಳ ಆಗಮನವನ್ನು ನಿರೀಕ್ಷಿಸುವ,

ಸುಜ್ಞಾನಿಗಳ ಸೇವಕ

ಶ್ರೀ ಕೃಷ್ಣಜಯಂತಿ
ತಾ॥ 13-8-71

**ಯಂ. ಅಂಜನಪ್ಪ**
ಕುಚ್ಚಪ್ಪನಪೇಟೆ, ದೊಡ್ಡಬಳ್ಳಾಪುರ.
(ಮೈಸೂರು ಸ್ಟೇಟ್)

---

ಮುಂದೆ ಬರಲಿದೆ:

**" ಶ್ರೀ ದೇವದಾಸಿಮಾರ್ಯ ಕೃಪಾ ಪೋಷಿತ ಸಂಸ್ಕೃತಿ "**